# ಕವಿತಾ ಕಾಮಿನಿ

## ಭಾಗ ೨

(೬೦ ಕವನಗಳ ಸಂಗ್ರಹ)



೧೯೫೭

ಯಸ್. ವೆಂಕಟರಾಜ



ಶ್ರೀಕೃಷ್ಣಪ್ರಕಾಶನ, ಉಡುಪಿ.

# ಮುನ್ನುಡಿ

ಹತ್ತು ವರ್ಷಗಳ ಹಿಂದೆ ಉಡುಪಿ ಕಿರಿಯರ ಪ್ರಪಂಚದವರು ನನ್ನ ಕವಿತಾ ಕಾಮಿನಿ ಭಾಗ ೧ನ್ನು ಪ್ರಕಟಿಸಿದಂದಿನಿಂದ ಬೆಳೆದು ಬಂದ ನನ್ನ ಕವಿತಾಪರಿವಾರವನ್ನು ಈ ಎರಡನೇ ಭಾಗದಲ್ಲಿ ಸಂಕಲಿಸಿ ಓದುಗರ ಮುಂದಿಟ್ಟಿರುವೆನು. ಇವರಲ್ಲಿರುವುದು ೧೯೪೦ರ ನಂತರದ ೬೦ ಕವನಗಳು ಮಾತ್ರ. ಇಷ್ಟಕ್ಕೆ ಸುಮಾರು ೧೫೦ ಪುಟಗಳೂ ಮಿಕ್ಕಿ ಈ ಹೊತ್ತಿಗೆ ಹೆಚ್ಚಿ ಹೋದುದರಿಂದ ಕನ್ನಡ ವಾಚಕ ಜನಾಂಗದ ಇತಿಮಿತಿಗಳನ್ನು ಅರಿತುಕೊಂಡು ಮೇಲಿನ ಹಲವು ಕವನಗಳನ್ನು ಮೂರನೇ ಭಾಗಕ್ಕಾಗಿ ಮೀಸಲಾಗಿರಿಸಬೇಕಾಯಿತು. ಆದರೂ ಇದರ ಒಂದನೇ ಭಾಗಕ್ಕೆ ಅಂದೇ ದೊರೆತ ಸೌಹಾರ್ದಮಯ ಸ್ವಾಗತವೇ ಅದಕ್ಕೂ ಕೊಂಚ ಮಿಗಿಲಾಗಿಯೇ ದೊರೆಯಬಹುದೆಂದು ಬರವಸೆಗೊಂಡಿದ್ದೇನೆ.

ಇದು ಕವಿತೆಗಳ ಕಾಲವಲ್ಲ—ಕಾದಂಬರಿಗಳ ಕಾಲ. ಬಣ್ಣ ಬಣ್ಣದ ಹೊದಿಕೆಯ ಬಿನ್ನಾಣದ ಕಾದಂಬರಿಗಳು ಯುವಕರ ಕೈಯಿಂದ ಕೈಗೆ ತೂರುತಿರುವಾಗ ಇಂತಹ ಸಂಗ್ರಹನನ್ನು ಪ್ರಕಟಿಸುವುದು ಅಕಾಲಿಕವೇ ಸರಿ. ಆದರೆ ಕವಿಗೆ ತನ್ನ ತಲೆ ತಿನ್ನುತಿರುವ ಭಾವಗಳನ್ನು ಹೊರಗೆಡಹದೆ ಉಪಾಯವಿಲ್ಲ. ಎಂದ ಮೇಲೆ ಯಾವ ಗ್ರಹಚಾರದಿಂದಲೇ ಆಗಲಿ ಅವುಗಳನ್ನು ನಾಲ್ಕು ಮಂದಿಯ ಮುಂದಿಡಬೇಕೆಂಬ ಉತ್ಕಟೇಚ್ಛೆಯಂತೂ ತಪ್ಪಿದ್ದೇ ಅಲ್ಲ! ಅದರ ಪರಿಣಾಮವಾಗಿ ಆತನು ಇಂತಹ ಕರ್ಮಗಳಿಗೆ ಗಂಟು ಬೀಳುತ್ತಾನೆ. ಒಳ್ಳಿತೋ ಕೆಟ್ಟದೋ—ಅದರ ಪರಿಣಾಮವನ್ನಂತೂ ಅವನು ಅನುಭವಿಸಿಯೇ ತೀರಬೇಕು ತಾನೆ? ಅದು ಅವನ ಹಣೆಬರಹವೆಂದರೂ ಸರಿ. ಆದರೆ ಕನ್ನಡ ಕುಲದ ಕೆಲವು ಮಂದಿಯಾದರೂ ಅದನ್ನು ಎತ್ತಿಗೊಂಡು ಮೆಚ್ಚಿ ಸೈಗುಟ್ಟಿದರೆಂದರೆ ಸಾಕು - ಆಗ ಕವಿಯ ಪರಿಶ್ರಮವೇ ಪಾವನವಾಗುವುದು. ನಾಡಿನ ಸೌಭಾಗ್ಯದ ಮಹಾದ್ವಾರ ವಿನ್ನೂ ಮುಚ್ಚಿಲ್ಲವೆಂದು ಮನಸ್ತೃಪ್ತಿಯಾಗುವುದು! ನಿಸ್ಪೃಹನಾದ ಕನ್ನಡ ಕವಿಗೆ ಇದರಿಂದ ಹೆಚ್ಚಿನದೇನು ಬೇಕಾಗಿದೆ? ಅಷ್ಟೇ ಸಾಕು!

೨೭—೬—೧೯೫೭. **ಯಸ್. ವೆಂಕಟರಾಜ.**

# ಪರಿವಿಡಿ

# ಕವಿತಾ ಕಾಮಿನಿ

## ತಿರುಕನ ಹಾಡು

೧

ಮೊದಲ ಬಿಸಿಲ ಹೊನ್ನಿನೆರಕ
ಮಧುರ ಮೋಹವೆರೆವ ಮುನ್ನ—
ಮೊದಲಿಗೊಗೆದ ಭ್ರಮರ ಯಾತ್ರಿ
ದಿನದ ಮಾರ್ಗವರಿವ ಮುನ್ನ—
ಬನದ ತೊರೆಯ ತರಲಗೀತಿ
ತೆರೆಯೊಳಾಡಿ ತೊದಲುವನ್ನ—
ಬಾನಕೊನೆಯ ನಿಚ್ಚಟದಲಿ
ತೊದಲು ತೇಲಿ ತೂಗುವನ್ನ—
ಆವಗಾನದಿಂಪು !

ಹೊಸತು ರಾಗ ರಮ್ಯರೇಖೆ
ಜಗತಿಗಿನ್ನು ಮೂಡಲಿಲ್ಲ.
ಹೊಸತು ಗೀತಿ ಗಮಕದರಿಕೆ
ಕೊರಳಿಗಿನ್ನು ಕೂಡಲಿಲ್ಲ.
ಮರುಳು ಹಕ್ಕಿ ಮೌನವಿಡಿದ
ನೇಮವಿನ್ನು ತೀರದಾಗ—
ಕೊನೆಯ ಮುತ್ತಿನಮೃತಯೋಗ
ತುಟಿಯನಿನ್ನು ಮೀರದಾಗ—
ಆವಗಾನದಿಂಪು !

೨

ಹೊನಲತಡಿಯ ಜೋಪಡಿಯಲಿ
ಹಾಡಿಕುಣಿವ ತರುಣಯೋಗಿ
ಮೇಳವಿಡಿದ ಮುರುಕು ಬೀಣೆ—
ಗಾಗಿ ಬಾಳ್ವ ಚಿರವಿಯೋಗಿ!

ಕರುಣೆಕೋದ ಕಟ್ಟಳೆಯಲಿ
ಹಾಡ ಹೊಸೆವ ತಿರುಕನಾತ—
ಜೀವನದನುವಾಹಿನಿಯಲಿ
ಕೂಡಿ ಕಲಕಿತವನ ಗೀತ—

ಏನು ಗಾನದಿಂಪು!

ಆವಹಾಡೊ—ಆವಹಲುಬೊ—
ಅದರ ಭಾವ ತಿಳಿಯಲಿಲ್ಲ
ಆವದಿನದ ಕತೆಯಕೂಡೊ—
ಅದರ ತತ್ವವರಿಯದಲ್ಲ!

ಹರಿದ ತೆಪ್ಪ ತೆರೆಗೆತೂರಿ
ಹಿಂದೆ ಮತ್ತೆ ಸರಿವುದುಂಟು—
ಕಳೆದ ಕಾಲದೆಣಿಕೆಗಾಗಿ
ಮನಸು ಮೋಹಗೊಳುವನಂಟು

ಏನು ಗಾನದಿಂಪು!

ಮುಗಿದ ಕಣ್ಣಿನಾಸರದಲಿ
ಬೆಸೆದ ಭಾವದೊರತೆಯೊಂದೆ—
ಸೆಳೆವ ಸುಯ್ಲುತತ್ತರದಲಿ
ಎದೆಯನೋಂಪಿನಳತೆಯೊಂದೆ—

ಅದುವೆಗೀತಿ—ಬಯಲಸರಿಯ
ತಣ್ಪಿನೊಸರು ಸೂಸಿದಂತೆ!
ಅದುವೆರೀತಿ—ಬನದಸಿರಿಯ
ಮೆಲುಪುಗಾಳಿಯಲುಗಿದಂತೆ!
ಏನು ಗಾನದಿಂಪು!

೩

ಮೂಡ ಮನೆಯೊಳರುಣಬಿಂಬ
ಮುಗಿಲ ಮಾಡವೇರಿರುವುದು
ಹಾಡು ಹಾಡಿದಮರಗುಂಜ
ದಿಕ್ಕುದೆಸೆಯೊಳಡರಿರುವುದು
ತೀಡುವೆಲರತೆಳ್ಳುಡಿಯಲಿ
ಮಲರು ಮೈಮೆವೆತ್ತಿರುವುದು
ಜೋಡಿಗಾಗಿ ಹಸಿದಹುಮ್ಮ
ಜೀವಜೀವ ಸುತ್ತಿರುವುದು—
ಏನು ಗಾನದಿಂಪು!

ಸೊಗಸುಗಂಡ ಶುಕನಿಯೋಗಿ
ಸೊಬಗನಲ್ಲಿ ಸಾರಲಿಲ್ಲ!
ಸೊದೆಯನುಂಡ ಭೃಂಗ ಭೋಗಿ
ನಲಿದು ಹಿಗ್ಗಿ ಹಾರಲಿಲ್ಲ!
ದಿನದ ಕುಂಚದಮರ ಶಿಲ್ಪ
ಚಿರಸಮಾಧಿಗೊರಗಿದಂತೆ!
ಧರೆಯ ಕರ್ಮಕರಣ ಕಲ್ಪ
ಮಲಗಿ ಮತ್ತು ಮೀರಿದಂತೆ!
ಏನು ಗಾನದಿಂಪು!

ಒಂದೆ ಬೋಧ ಕರಣಕರಣ
ಕಲ್ಪನೆಯಲಿ ಕೊನರುವಂತೆ—
ಒಂದೆ ನಾದ ಹಲವು ಹಿತದ
ಕಂಪನೆಯಲಿ ಕುಸುರಿತೆಂತು !

ಶೂನ್ಯ-ಸಂಗ-ಸಿದ್ಧಿಗಳಲಿ
ಹೊಸತು ಹುಟ್ಟು ತೊಳಲುವಂತೆ—
ಮೌನ—ಮೃದು—ವಿಕಾಸಗಳಲಿ
ತಳುಹಿ—ತೇಲಿ—ತೋರಿತೆಂತು !

ಏನು ಗಾನದಿಂಪು !

೪

ಜೋಂಪುವಡೆದ ಜೀವಜಗತಿ
ತನಗೆತಾನೆ ತುಡುಕಿತೇಕೆ?
ಇಂಪುಗರೆದ ಮಧುರಶಾಂತಿ
ಬೆದರಿ ಚೀರಿ ಸಿಡುಕಿತೇಕೆ ?—

ಕೊನೆಯ ರಾಗ ರತಿಯನೊಲಿಸಿ
ಕುಲುಕು ತಂತಿ ಕಡಿದುದಯ್ಯೊ—
ಕೊನೆಯ ಹಾಡುಹಲುಬನ್ನೈಸಿ
ಎದೆಯ ತಂತಿ ಕಡಿದುದಯ್ಯೊ !

ಎಲ್ಲಿ ಗಾನದಿಂಪು !

ಕೆಲದ ವೀಚಿ ಕೂಲವರಸಿ
ಮರುಗಿ ಮೆಲ್ಲನಡುಗುತಿಹುದು !
ತೆಳುವುಗಾಳಿ ತಡೆದು ಬೀಸಿ
ಬರಿದೆ ಸುತ್ತಿ ಬಳಲುತಿಹುದು !

ಮುಳಲತಡಿಯು ಜೋಪಡಿಯುಲಿ
ತಿರುಕನೇನು ಕಂಡಿರುವಿರೆ?
ಬೆಳಗು—ಬೈಗು—ಕತ್ತಲಿನಲಿ
ಹಾಡನೇನು ಕೇಳಿರುವಿರೆ?
ಎಲ್ಲಿ ಗಾನದಿಂಪು!

೯—೧—೧೯೪೦

---

## ಪುನರಾಗಮನ

೧

ಹಲವು ದಿನಗಳ ಮೇಲೆ ಕೊರಗಿ ಕುಗ್ಗಿದ ಕೊರಳು
ಮೆಲಿತು ದನಿಯುಲಿ ಸೊಗಸಹಾಡಬಯುಸಿದೆಯಲ್ಲ!
ಹಲವು ದಿನಗಳ ಮೇಲೆ ಗೈಮೆಗಳುಕಿವ ಬೆರಳು
ನಡುಗಿನೇಹದ ಚಿತ್ರ ಬರೆಯಲೆಳಸಿದೆಯಲ್ಲ!
ಕಾಲಕೂಕಾಲಕೂ ಮಾಸದೊಂದೇ ಆಸೆ
ಸಾರಿದನಿತೂ ಸಾರಿ ಸುತ್ತಿಬಹುದಲ್ಲ!
ಜನ್ಮಕೂ ಜನ್ಮಕೂ ಕಾದು ಕರಗದಮೂಸೆ
ಪ್ರಾಣದೆರಕವ ಹೊಯ್ದು ಕಾದಿರುವುದಲ್ಲ!
ಅನುಭವದ ಪರಿಣತಿಯ ಬದುಕು ಬಿತ್ತಿದ ಬೇನೆ
ಸವಿಸಿಹಿಯ ಸೋಗಿನಲಿ ನಚ್ಚಿರುವುದಲ್ಲ!
ಬಹುದಿನಗಳುಪವಾಸ ಹಸಿವು ಹೊತ್ತಿಗೆಯ್ಸಿಸಿ
ಹೊಸತು ಹಬ್ಬದ ಹಸೆಗೆ ಮೆಚ್ಚಿರುವುದಲ್ಲ!

೨

ದಿನದಮನೆಯುಲಿ ಬೆಳಕು ನಸುಕು ನಗೆಯುನು ಬೀರಿ
ಹೊಸತು ಹುಮ್ಮಿನ ಸಿರಿಯುನಳವಡಿಸಿದಾಗ—

ಜನಮನದ ಮೇಳದಲಿ ಮಧುರ ಮೋಹವನೆರಚಿ
ಜೀವನದ ದಿವ್ಯತೆಯ ಸೊದೆ ಹರಿಸಿದಾಗ—

ಕಾಡಿನೆದೆಯಾಳದಲಿ ಹುಗಿದ ಕೋಗಿಲೆಯೊಂದು
ಎನಿತೊ ಹಾಡನು ಹಾಡಿ ನಲಿದಿರುವುದೆಂತು !
ತೀಡುವೆಲರಲಿ ಕೊರಳ ಮೆಲುಪು ಮೆಚ್ಚುಗೆಯೂಡಿ
ಭಾವಭಾವವನಲುಕಿ ತೇಲಿರುವುದೆಂತು !

ಸಂಜೆ ಬಾನಿನ ಬಳಿಯ ಕೊನೆಯ ಕಿಬ್ಬದಿಯಾಚೆ
ಸೊಬಗು ಬೆಳಗಿನ ಬದುಕು ತಲೆಮರೆಸಿಹೋಯ್ತು !
ಅಂಜಿದೊಲುಮೆಯ ಹೃದಯದಿಂಚರದ ಸವಿಸೋನೆ
ತನಗೆ ತಾನೇ ತುಡುಕಿ ತಲೆಮರಸಿ ಹೋಯ್ತು !

೩

ಬಾನಿನಲಿ ತಿಂಗಳಿದೆ ತಿಂಗಳನ ತಣ್ಪಿನಲಿ
ಎದೆಯ ಹಕ್ಕಿಯ ಹಾಡು ಬೆರೆತಿರುವುದಿಲ್ಲ
ಮೌನಮನಸಿನ ಕೋಣೆ ಕತ್ತಲಿನ ಕೈಗೂಡು—
ಹರುಷ ಬಿತ್ತರವಲ್ಲಿ ಸುಳಿದಿರುವುದಿಲ್ಲ.

ಗಳಿಗೆ ಗಳಿಗೆಗಳೆಂಬ ಕಲ್ಪಂಗಳೆಣಿಕೆಯಲಿ
ಸೆಳೆದ ನಿಡುಸೇದೆಗಳನರಿತಿರುವರುಂಟೆ ?
ಕಳೆದೊಂದು ಕಾಮನೆಯ ಕಿರಣಕಲ್ಪನೆಗಾಗಿ
ಸುರಿದ ಕಣ್ಣಿನ ಹನಿಯ ಕಂಡಿರುವರುಂಟೆ ?

ಇರುಳ ಘನ ಗರ್ಭದಲಿ ಬಯಕೆಯೊಂದೇ ಕುದಿದು
ಏಸು ದಿನಗಳ ತನಕ ಬಾಳಲಿನ್ನುಂಟು ?
ನೆನಹು ತೆಳ್ಪುಡಿಯಿಡಿದ ಮಾಸದೊಂದನುರತಿಯ
ಏಸು ಮಿದುಮೈಮರೆಸಿ ತಾಳಲಿನ್ನುಂಟು ?

೪

ಅದೊ! ಕೋಳಿ ಕೂಗುತಿದೆ—ಮೂಡಮನೆ ಬಾಗಿಲಿಗೆ
ಆರೊ ನೆಂಟರು ಬಂದು ಕಾದಿರುವರಂತೆ!
ಅದೊ ಗಾಳಿ ತೀಡುತಿದೆ—ದಿಕ್ಕು ದಿಕ್ಕಿನ ಕೊನೆಗೆ
ಹರುಷ ಹೆಚ್ಚಳದೊಸಗೆ ಹಬ್ಬಿರುವುದಂತೆ!
ನಿಂದು ನಡೆನೋಡದಲೆ—ಕರೆದು ಮಾತಾಡದಲೆ
ಮೌನದಲಿ ಮುನ್ನಡೆದು ಕದದೆರೆವೆನೇನು?
ಆರ ಬರವನೊ ಕಾದು ಕಾದು ಕೊರಗಿದ ಜೀವ
ಕಂಡು ಕಂಬನಿಗರೆದು ಮೈಮರೆಯದೇನು?
ದಿನದ ಮೋಹದ ಮನೆಯ ಮೊದಲ ಮೆಟ್ಟಿಲನೇರಿ
ಆರು ಬಂದಿಹರಲ್ಲಿ?—ಎನ್ನ ಮನದನ್ನೆ!
ಕುಡಿನೋಟದರಿಕೆಯಲಿ ಕುಸುರು ಲಜ್ಜೆಯನೈಸಿ
ಆರು ನಿಂದಿಹರಲ್ಲಿ?—ಎನ್ನ ಮನದನ್ನೆ!

೫

ಬದುಕಿನಲಿ ಭಾವವಿದೆ—ಭಾವಗಳನೆಚ್ಚರಿಸಿ
ಜೀವರಂಗದ ಕೊನೆಗೆ ಕರೆಯಲಿನ್ನಾರು?
ಮನಸಿನಲಿ ಮೋಹವಿದೆ—ಮುದ್ದಿಟ್ಟು ಮೈದಡವಿ
ಮಮತೆಗಾಣಿಸಿ ಮೆಚ್ಚಿನೆರೆಯಲಿನ್ನಾರು?
ಎದೆಯ ಬೀಣೆಯನೆತ್ತಿ ತಂತಿಗಳ ತೆರನಿರಿಸಿ
ಮಿಡುಕಲೇನಿದು—ಅಮಮ—ಹೊಸತು ಜೇಂಕಾರ!
ಶೂನ್ಯ ಸಂಗದ ಸೆರೆಯ ತರುಣ ಕರಣಂಗಳಲಿ
ರಾಗ ವಿಸ್ತರದ ನವಸತ್ವ ಸಂಚಾರ!
ಹಲವು ದಿನಗಳ ಮೇಲೆ ಕೊರಗಿ ಕುಗ್ಗಿದ ಕೊರಳು
ಮೆಲಿತು ದನಿಯಲಿ ಸೊಗಸ ಹಾಡಬಯಸಿದೆಯಲ್ಲ!

ಹಲವು ದಿನಗಳ ಮೇಲೆ ನಿದ್ದೆಗೊದಗಿದ ಬಾಳು
ಕನವರಿಸಿ ಕಣ್ದೆರೆದು ಕುಣಿಯಲೆಳಸಿದೆಯಲ್ಲ!

೩೧-೩-೧೯೪೦

## ಒಳಮಾತು

೧

ಆರೊಡನೆಯು ಹೇಳದಿರು—
ಆರೊಡನೆಯು ಕೇಳದಿರು
ಆರೊಡನೆಯು ಹಿತವಾನಿಸಿ
ಮನದೆಣಿಕೆಯ ಸಾರದಿರು!

ಆರಿಗು ಸೂಳರಿಸದಿರು—
ಆರಿಗು ಸೈವೆರಸದಿರು—
ಆರಿಗು ಮಿಗು ಸಂತಸದಲಿ
ಎದೆಬಾಗಿಲ ತೆರೆಯದಿರು!

ಯುವ ಹೃದಯದ ಮಂದಿರದಲಿ
ಮೃದು ಮಮತೆಯು ಮಲಗಿರಲಿ!
ಮೊಲೆನೆಲೆಗಳ ಸರಿಸಮದಲಿ
ಸೆರಗಿಕ್ಕಿಸಿ ಹುದುಗಿರಲಿ!

೨

ಮುಂಜಾವದ ಮಧುರಿಮೆಯಲಿ
ಹೆಚ್ಚಿರುವುದು ಹೊಸಬಯಕೆ—
ಮಂಜುಲ ಮಧುಶೃಂಗಾರದ
ಸವಿಸೋನೆಯ ಹೆಗ್ಗಳಿಕೆ!

ಕಿರುಮುಗುಳಿನ ಕಿವಿದೆರೆಯಲಿ
ಮೆಲುಮಾತಿನ ಸೊದೆಯುಸಿರಿ —
ಹುಮ್ಮನಸಿನ ಹಸೆವನೆಯಲಿ
ಕದವಿಕ್ಕಿದೆ ಪರಮೆವರಿ !

ತರುಲತೆಗಳ ಕುಣಿಕುಣಿಸುವ
ತಂಗಾಳಿಯೆ!—ತೆರಳತ್ತ !
ಕಿರುವೂಗಳ ಕದ ಕುಲುಕುವ
ಖಲಕಿರಣವೆ!— ನಡೆಯತ್ತ !

ಮುಗುದೆಸಳಿನ ಮೈವಿಡುಕಿಸಿ
ಬಾಯ್ಬಿರಿಸುವುದಿದು ನಂಟೆ ?
ಬಾನೇರಿದ ಮರಿಯಾರಡಿ
ಮರುಬೇಟಕೆ ಬರಲುಂಟೆ ?

೩

ಆರೊಡನೆಯು ಹೇಳದಿರು—
ಆರೊಡನೆಯು ಕೇಳದಿರು—
ತನುಮನಸಿನ ತತ್ತರದಲಿ
ನಿಡುಸೇದೆಯನೆಳೆಯದಿರು !

ಆರಿಗು ಬಗೆಯರಿಸದಿರು
ಎದೆ ತಂತಿಯನುಲಿಸದಿರು—
ನಡೆನುಡಿಗಳ ಜಡತನದಲಿ
ಬಿಟ್ಟಿವೆಗಳ ನನೆಸದಿರು !

ನಸು ಲಜ್ಜೆಯ ಮಧುಮಂತ್ರಣ
ಚೆಂದುಟಿಗಳ ಸೆರೆಯಿರಲಿ !

ಕುಡಿನೋಟದ ನವಚಿತ್ರಣ
ಕಣ್ದೆರೆಗಳ ಮರೆಯಿರಲಿ!

೪

ಸಂಜೆಯ ಸಿರಿಗನ್ನಡಿಯಲಿ
ಮುತ್ತಿರುವುದು ಬಲುಮುಸಕು!
ಅಂಜಿದ ಜಗದನುಭಾವಕೆ
ಕಟ್ಟಿರುಳಿನ ಮೇಲ್ಮುಸುಕು!

ನವಭೋಗದ ನೆಮ್ಮದಿಯಲಿ
ಕಣ್ಮುಚ್ಚಿದೆ ಕಮ್ಮಲರು
ಚಿರಪೌನದ ಜೋಗುಳದಲಿ
ತೂಪಿಟ್ಟಿದೆ ಸವಿಗನಸು!

ಜಡಜಡತೆಯನೆಳ್ಚರಿಸುವ
ತಂಗದಿರೇ—ತೆರಳತ್ತ!
ಎಣೆವಕ್ಕಿಗಳೆದೆಯುರಿಸುವ
ಕಿತ್ತರಿಲೇ—ಸಾರತ್ತ!

ಭವರಂಗದ ದೇಗುಲದಲಿ
ಮೆರೆದಿದೆ ನಂದಾದೀಪ!
ತಿಳಿನೇಹದ ಬೆಳ್ಬೆಳಗಿರೆ
ಅದೆ ಬಾಳುವೆಯನುರೂಪ!

೫

ಆರೊಡನೆಯು ಹೇಳದಿರು—
ಆರೊಡನೆಯು ಕೇಳದಿರು—
ಆರೊಡನೆಯು ಬಿಚ್ಚಿದೆಯಲಿ
ಬಗೆಯಾಳವನರಿಸದಿರು!

ಆರಿಗು ತಲೆದೂಗದಿರು
ಮೋನದ ತೆರೆನೀಗದಿರು—
ಮನದೊಲುಮೆಯ ನಿಡುಪಯಣದೆ
ನಡೆ ಹೆಜ್ಜೆಯನುಳಿಸದಿರು!

ಬನವೆಣ್ಣಿನ ತಳಿರುಡಿಯಲಿ
ಸೊಗದಿಂಚರ ಮೊಳಗಿರಲಿ!
ಅನುರಾಗದ ನನೆಮನೆಯಲಿ
ಒಳಮಾತಿದು ಮೆಚ್ಚಿರಲಿ!

೪—೪—೧೯೪೦

---

## ಮಧುಬಾಲೆ

೧

ಬಾಳಿನೊಂದರಮನೆಯ ಮನಸಿನುದ್ಯಾನದಲಿ
ಮೌನ ಮೋದದ ಮಧುರ ಹೃದಯ ಸಂಗೀತ—
ಆಸೆಯರಳಿದ ಹೂವಿನುಸಿರ ತಂಗಾಳಿಯಲಿ
ಭೋಗ ಬಂಧದ ಭಾವಲತೆಯ ಕುಣಿಕುಣಿತ!

ಮೊದಲ ಬೈಗಿನ ನಸುಕಿನುಡಿಯ ಸಂವರಣದಲಿ
ಕರೆವ ಕೋಗಿಲೆಯ ಕಲರುತಿಯ ಹಿಮ್ಮೇಳ
ಮೊದಲ ಕಿರಣದ ರಾಗರಂಜನೆಯ ಪಟಲದಲಿ
ಮೊಳಗಿಹುದು ಪಾತರದ ಮೃದು ಮನಸಿನಾಳ!

ಬೆಳಕು ತೋರಿಹುದಿತ್ತ ಹೊಸತು ಹುಮ್ಮಿನ ಬೆಳಕು—
ಕಳೆದ ಕತ್ತಲ ಕೊನೆಯ ಗಂಟೆ ಜಡಿದಿಹುದು
ಆಶೆ ನೈರಾಶೆಗಳ ತಡಿಗಳಲಿ ತುಳುತುಳುಕಿ
ಹಳೆಯ ಹಂಬಲಕೊಚ್ಚಿ ಹೊನಲು ಹರಿದಿಹುದು!

**ಬಾ**ಳು ಕಂಡಿರದ ಹೊಸತೂರಿನತ್ತಣ ಕರೆಗೆ
ದುಮುಕಿ ಧಾವಿಸುತಿರುವ ಜೀವನದ ಯಾತ್ರೆ!
ಜೀವದಲಿ ಭಾವದಲಿ ಆಸೆಗುಟುಕನು ನೀಡೆ
ಬಳಿಯೊಳೊಂದೇ ಬುತ್ತಿ ಭವದ ಮಧುಪಾತ್ರೆ!

**ಹೆ**ಜ್ಜೆ ಹೆಜ್ಜೆಗು ಮಾನ—ಹೆಜ್ಜೆ ಹೆಜ್ಜೆಗು ಬೆಸನ
ಹರುಷ ಬೆತೆಗಳ ಭೇದ ದೇಹಕಿನ್ನಿಲ್ಲ!
ನಿಚ್ಚಟದ ನಿಡುಪಯಣಕಡಿಯಳುಕಿ ತಡೆದಾಗ
ಮದಿರೆಯೊಂದೇ ಮತ್ತು ಮನಕೆಬೇಕಲ್ಲ!

**ಮು**ಗಿದ ಕಂಗಳ ಯೋಗ—ತರುಣಕರಣ ಸಮಾಧಿ—
ಬಾಗಿ ಬಿನ್ನೈಸಿ ತೊದಲುವ ಸಾಮಗಾನ!
ನೀನೆ ನಾನೆಂಬ ತತ್ಪರತೆಯಲಿ ತಪವೈಸಿ
ಮುಕುತಿ ಪಡೆದಿಹುದೇನು—ಆಹಹ ಮಧುಪಾನ!

೨

**ಬಾ**ರೆನ್ನ ಮನದನ್ನೆ!—ಮಮತೆಯಲಿ ಮುಂಗೊಂಡು
ಹೃದಯಮಂದಿರಕೈದಿ ಹಣಕಿ ನೋಡಿತ್ತ!
ದಿನ ದಿನದ ಗೈಮೆಯಲಿ ಗಾರುಗೊಂಡಿರುವಾಗ
ಸೊಗಸು ತುಂಬುವರಾರು?—ಹಲುಬುತಿದೆ ಚಿತ್ತ!

**ಭೋ**ಗದಲಿ ಕಣ್ಮುಗಿದು ಕೊಳಲು ಕನವರಿಸಿರಲು
ಕರುಣೆಯಲಿ ಕೋರೈಸಿ ಕುಡಲು ನೀನೆ ಗತಿ!
ಚಾಗದಲಿ ಕಣ್ದೆರೆದು ಕೊಡಲು ಮನವರಿಸಿರಲು
ಬಯಕೆಯಲಿ ತಲೆಬಾಗಿ ಕೊಳಲು ನೀನೆ ರತಿ!

**ನಾ**ಕದಲಿ ನೀನಿರದ ಶೂನ್ಯತೆಯೊಳೆದೆಗರಗಿ
ಕೊರಗಿ ಕಂಬನಿಗರೆದು ಬದುಕಿಹುದು ಸಾವು!

ನರಕದಲಿ ನೆಮ್ಮದಿಯೊಳೊಲಿದು ಸಿನ್ನೊಡನಾಡಿ
ಸಾಸಿರಕು ಸಾವನೇ ಬಯಸಿಹುದು ಬದುಕು !

ಆಡದಿರು—ಬರಿದೆ ಮಿಡುಕಾಡದಿರು ಮೌನದಲಿ
ಕನಸು ರಾಜ್ಯವ ಕಟ್ಟಿ ಆಳಲಿಹುದಂತೆ !
ಜೋಡು ಬದುಕಿನ ಜಗತಿಯಾಟದಲಿ ನಲಿನಲಿದು
ಬಳಲಿದೊಡಲನು ನಿದ್ದೆ ತೂಗಲಿಹುದಂತೆ !

ಇಂದು-ನಾಳೆಗಳೆಂಬ ದಿವಸದೆಣಿಕೆಗಳಿಲ್ಲ—
ಗಳಿಗೆ ಗಳಿಗೆಗು ಕುಡಿದು ಕುಣಿವ ಹೊಸ ಹುರುಪು !
ಇಹಪರಗಳೆಂಬ ಕಾಮಿತಗಳಲಿ ನವೆದಿಲ್ಲ–
ಇಂದು ತೇಗಿದ ತೋಷವದೆ ಸೌಖ್ಯದೊದಪು !

ತಳಿರು ಚೆಂದುಟಿಗಳಲಿ ಮೋಹ ಮದಿರೆಯನಿರಿಸಿ
ಹೃದಯದೊಲುಮೆಯ ಹಸೆಗೆ ಕರೆಕರೆವೆಯೇನು ?
ಬಿಗಿದ ತೋಳಿನ ಸೆರೆಯೊಳೆದೆಯ ಬಟ್ಟಲ ತುಂಬಿ
ಸರಸ ಸಾಯುಜ್ಯದಲಿ ಮೈಮರೆವೆಯೇನು ?

೧೮—೬—೧೯೪೦

---

## ಮಿಲನಗಾನ

೧

ದಿನದ ಹಕ್ಕಿ ನುಣ್ದನಿಯಲಿ
ಹಾಡಿ ಜೋಗುಳಾಡುತಿತ್ತು
ಮೆಲಿತುಗಾಳಿ ತಳುಹಿ ತೂರಿ
ತಳಿರು ಹಸೆಯ ತೂಗುತಿತ್ತು

ಭ್ರಮರಯುಗದ ಗುಂಜನೆಯಲಿ
ನೊದಲಭೇರಿ ವೊಳಗುತಿತ್ತು
ದಿವದ ರಾಗ ರಂಜನೆಯಲಿ
ಜಯ ಪತಾಕೆ ತೊಳಗುತಿತ್ತು

ಹೊಸತು ಹುಟ್ಟು ಹುತ್ತರಿಯಲಿ
ತಿರೆಯತೋಟ ತೆರೆಯುವನ್ನ—

ಕನಸು ಬಿಗಿದ ಕಣ್ಣೆವೆಗಳ
ಕುಲುಕಿ ಕೋರಿ ಕರೆವರಾರು?
ಮುಗುಳು ಬಗೆಯ ತೆರೆಯನೆತ್ತಿ
ಮೌನರತಿಯನೆರೆವರಾರು?

ಮುಲರಿನೆದೆಯ ಮಂದಿರದಲಿ
ಸೊಬಗು ಸಗ್ಗವಾಯಿತಲ್ಲ!
ಮುಗುದತನದ ಮನಸುಬಿಚ್ಚಿ
ಸೊಗದ ಜೇನು ಹರಿಯಿತಲ್ಲ!

ಸರಸಭೋಗ ಸಾಧನೆಯಲಿ
ಪ್ರಣಯ ಪುಣ್ಯದೊಸಗೆ ಸಾರಿ—
ಬಯಕೆ ತೂಗಿದುಯ್ಯಾಲೆಯಲಿ
ಭವದ ಯೋಗ ನಿದ್ರೆಯುಡರಿ—
ಒಲಿದೆವಲ್ಲ!
ಒಲಿದು ನಚ್ಚಿ ನಲಿದೆವಲ್ಲ!

ಮರುಳು ಮನಸೆ! ಮೆಚ್ಚುಗೆಯಲಿ
ಮರೆತು ಕದವನುಳಿಯದಿರು!
ದಳಿತ ದಳಗಳಶ್ರುಧಾರೆ
ಸುರಿಸಿ ಮತ್ತೆ ಮರುಗದಿರು!

೨

ಸಂಜೆವೆಣ್ಣು ಕಾಮನೆಯಲಿ
ಕರೆವನೋಟ ಕಂಡಿರುವುದು
ಬೈಗು ಮುಗಿಲ ಜವನಿಕೆಯಲಿ
ಭಾವರೇಖೆ ಹೊಂದಿರುವುದು

ದಿನದ ಗತಿಯ ಗಳಿಗೆ ಹೆಜ್ಜೆ
ತಡೆದು ಕುಣಿತಕೆಳಸಿರುವುದು
ಕೊನೆಯ ಕೂಟದನುಗಮದಲಿ
ಬಯಕೆಯೊಂದೆ ನಿಮಿರಿರುವುದು

ಕಡಲ ಕರೆಯೊಳಡಗಿ ತೋರಿ
ತರಲವೀಚಿ ತೊದಲುವನ್ನ—

ತರುಣ ಕರಣ ಮೂರ್ಛನೆಯಲಿ
ಮನಸು ಮಿಡುಕಿ ಕರೆವರಾರು?
ಅಳುಕು ಬಿಗಿದ ಮೆಲುಮಾತಿಲಿ
ಮಮತೆಯುಸಿರನೆರೆವರಾರು?

ಕ್ಷಣಿಕ ಮೃತ್ಯು ಮಂದಿರದಲಿ
ಮಿಲನಗಾನ ಮೆರೆಯಿತಲ್ಲ!
ಹುಟ್ಟು ಸಾವಿನೆಣಿಕೆ ಕೊಚ್ಚಿ
ಅಮರಕಾವ್ಯ ಹರಿಯಿತಲ್ಲ!

ಸೊದೆಯ ಸವಿದು ತೋಳ್ಸೆರೆಯಲಿ
ಸತ್ಯ ಸುಖದ ಸೊಗಸು ಕೂಡಿ—
ಜೀವಜೀವ ಜಾಗೃತಿಯಲಿ
ಕನಸು ಕಂಡು ಸರಸವಾಡಿ—

ಒಲಿದೆವಲ್ಲ !
ಒಲಿದು ನಚ್ಚಿ ನಲಿದೆವಲ್ಲ !

ಮರುಳು ಮನಸೆ! ಮೈಮರೆಯಲಿ
ಬಿಗಿದ ತೋಳನುಳಿಯದಿರು !
ಮಳಲತಡಿಯ ಮಿದು ಹಾಸಿಲಿ
ಹೊರಳಿ ಮತ್ತೆ ಮರುಗದಿರು !

೩

ಬಾನಗುಡಿಯ ಗೋಪುರದಲಿ
ಚಂದ್ರ ಬಿಂಬ ಬೆಳಗುತಿತ್ತು.
ಇರುಳ ಸಿರಿಯ ಸಜ್ಜೆವನೆಯ
ಕಿರಿದು ಹಣತೆ ಮಿನುಗುತಿತ್ತು

ತಿಳಿಯ ಜೊನ್ನದಮೃತವಾಹ
ದಿಕ್ಕು ದೆಸೆಯೊಳೊಸರುತಿತ್ತು.
ಜೋಡಿನೊಡಲ ವಿರಹದಾಹ
ತನಗೆ ತಾನೆ ಆರುತಿತ್ತು

ಗಿರಿಯ ಗವಿಯ ಮರ್ಮರದಲಿ
ಮಂದವಾತವಲುಗುವನ್ನ—

ನೆಲಿತು ಮೆಲಿತು ಮೆಲ್ಲುಲಿಯಲಿ
ಕೊಳಲನೂದಿ ಕರೆವರಾರು?
ಬದುಕು ಹೊಳೆಯ ಮೃದುತಟದಲಿ
ಕಲಕಲತೆಯನೆರೆವರಾರು?

ಭುವಿಯ ಬಾನಿನೊಡನಾಟಕೆ
ಹೊಸತು ಸೇತು ತೂಗಿತಲ್ಲ !

ನಾಕನರಕಗಳನು ಸೆಣಸಿ
ಹೊಸತು ಸೃಷ್ಟಿಯಾಯಿತಲ್ಲ !
ನಗೆಯನೋಟ—ತುಟಿಯ ಬೇಟ
ನವಿರ ನೋಂಪುಗಳಲಿ ಬೆರೆತು—
ಗಳಿಗೆ ಗಂಟೆ— ದಿವಸ ಮಾಸ
ವರ್ಷಯುಗಂಗಳನೆ ಮರೆತು
ಒಲಿದೆವಲ್ಲ !
ಒಲಿದು ನಚ್ಚಿ ನಲಿದೆವಲ್ಲ !
ಮರಳು ಮನಸೆ ! ಮನ್ನಣೆಯಲಿ
ನಲಿದು ಕೈಯನುಳಿಯದಿರು !
ಗಿರಿಯ ಗಹನ ಶೂನ್ಯತೆಯಲಿ
ಬೆದರಿ ಮತ್ತೆ ಮರುಗದಿರು !

೨೨—೬—೧೯೪೦

---

## ಆರತಿ

### ೧

ಊರ ಕೊನೆಯುಗಡಿಯ ಕಾಡ ಕಮರಿಯತ್ತ
ಸುಳಿಯ ಸುತ್ತಿನುಡಿಯ ಹೊನಲು ಹರಿದಿದೆ
ಹೊನಲ ಮಳಲತಡಿಯ ಕೂಗಿನಳತೆಯಾಚೆ
ಹಳೆಯ ದೈವದೊಂದು ಗುಡಿಯು ಮೆರೆದಿದೆ
ಆರು ಬರುವರಿಲ್ಲ ಹರಕೆ ತರುವರಿಲ್ಲ—
ಮಸಣವೆರೆದ ಮೌನವೊಂದೆ ಮುತ್ತಿದೆ
ಏರುಮರದ ತುದಿಯ ಬಾನಿನೊಂದು ಬೆಳಕು
ಹೆದರಿ ಹೆದರಿ ಹಣಕಿ ಹಿಂದೆ ಸರಿದಿದೆ

ವರುಷಕೊಂದು ಬಾರಿ ನೆರೆವುದಲ್ಲಿ ಜಾತ್ರೆ—
ಊರಮಂದಿ ಹರಕೆಹೊತ್ತು ಬರಲಿದೆ
ಕೈಯ ಕೈಯ ಸೊಡರು ಕಾಡ ಕತ್ತಲಿನಲಿ
ಕಲೆತು ಕದನಹೂಡಿ ಬೆಳಕು ತರಲಿದೆ

ಬಹಳ ದಿನದ ಮೇಲೆ ಕಂಡ ಬೆಳಕಿಗಾಗಿ
ಹುಗಿದ ಹಾಲು ಹಕ್ಕಿ ಕಣ್ಣು ಕಿಸುರಿದೆ
ಬಹಳ ದಿನದ ಮೇಲೆ ನಡೆವ ನೇಮಕಾಗಿ
ಬೆಚ್ಚಿ ಬನದ ಜಂತು ಕಹಳೆಯೂದಿದೆ

ಬರುವರೆನಿತು ಮಂದಿ ನಡೆವ ನಡೆವ ಠೀವಿ
ಯರಿಕೆಗಾಗಿ ಹೊತ್ತ ಬಿರುದು ಬಾವಲಿ !
ಕೆಲದೆ ಕೆಲದೊಳೆಲ್ಲ ಹೊಗಳು ನೀತಿವಿಡಿದು
ನಡೆವ ಬಂದಿ ಜನರ ಬಹಳ ಹಾವಳಿ !

ಅನಿತು ಜನರನಾಳ್ವ ಊರಹಿರಿಯನೊಬ್ಬ—
ಅವನು ನುಡಿದ ಮಾತು ನೀತಿಯಾಗಿದೆ !
ಅವನ ನುಡಿಯನಾಡಿ ಅವನ ನಡೆಯ ನೋಡಿ
ನಾಡು ಗೈಮೆಯರಿತು ಮಾತು ಕಲಿತಿದೆ

ಹೊಸತು ಹೆಗಲವಲ್ಲಿ ಬಿಗಿದ ದಟ್ಟಿಕಚ್ಚೆ
ಕುಲುಕಿ ಕುಲುಕಿ ಕುಣಿವ ಕನಕ ಕುಂಡಲ—
ಸುಕ್ಕು ಹಣೆಯ ಮೇಲೆ ತಿದ್ದಿ ತಳೆದ ತಿಲಕ
ನರೆತ ಶಿರಸು ಹೊತ್ತ ವಸನಮಂಡಲ !

ಬದುಕಿನಳತೆ ಮೀರಿ ನಡುಗಿ ನಡುಗಿ ನಡೆವ
ಹೆಜ್ಜೆ ಹೆಜ್ಜೆಗಳಲಿ ಬಿಂಕ ಬೆರೆದಿದೆ
ಹಲವು ದೋಣಿಗಳಲಿ ಹರಿವ ಹೊಳೆಯ ದಾಂಟಿ
ಮಳಲದಿನ್ನೆಯಾಚೆ ಮಂದಿ ನೆರೆದಿದೆ

ಜಡದ ದೇಹಗಳಲಿ ಜೀವ ತೂರಿದಂತೆ
ಹೊಸತು ಹುಮ್ಮಗೊಂಡು ಕಾಡೆ ಕುಣಿದಿದೆ!
ಕಟ್ಟು ವಾದ್ಯಗಳಲಿ ಡೋಲು ಡಕ್ಕೆಗಳಲಿ
ಜನರ ಭಕುತಿ ಜಡಿದು ಗುಡಿಯೆ ನಡುಗಿದೆ!

ಊರ ಹಿರಿಯನಾಗ ಗುಡಿಯ ಬೀಗದೆರೆದು
ಮಣಿದು ಕೈಯ ಮುಗಿದು ಇಂತು ನುಡಿವುದು
'ಬಹಳ ದಿನದ ಮೇಲೆ ಒಪ್ಪು ತಪ್ಪುಗಳನು
ಸಲಿಸೆ ಬಂದೆವಯ್ಯ-ನೀನೆ ಕಾವುದು!'

ಮಾತು ಬಾರದೆಮ್ಮ ದೈವದೆದೆಯನರಿತು
ನುಡಿಯಲಿರುವ ಭಟ್ಟರೇನು ಧನ್ಯರು!
'ಭಕುತಿಯೊಂದೆ ಸಾಕು—ಭೋಗ ನಿಮ್ಮದಯ್ಯ
ಅದುವೆ ನಮ್ಮ ತೃಪ್ತಿ ನಾವು ದೇವರು!'

'ಆಗು ಹೋಗುಗಳಲಿ ಗೈಮೆ ನೇಮಗಳಲಿ
ಒಪ್ಪು ತಪ್ಪುಗಳನು ತಿದ್ದಿಕೊಳುವೆವು!
ಊರಿನೂರಿನೆದೆಯ ಮಾರಿಕಣೆಗಳನ್ನು
ಹಗೆಯ ಜನರಿಗುಳಿಸಿ ನಾವೆ ತಳೆವೆವು!'

'ಕಾಲಕಾಲಗಳಲಿ ಕೊರತೆ ಬಾರದಂತೆ
ಒಂದನೆರಡು ಮಾಡಿಕೂಡಿ ಕೊಡುವೆವು!
ಸುಡುವ ಬೆಂಕಿಗಳಲಿ ಹರಿವ ನೀರುಗಳಲಿ
ನಮ್ಮ ಕಲೆಯ ತೋರಿ ಕಾಯಲಿರುವೆವು!'

ಕಟ್ಟು ಕಟ್ಟಳೆಗಳ ಸೇವೆಗಳನು ಸಲಿಸಿ
ಮುದುಕ ಗೌಡನಾಗ ಹಿಂದೆ ಸರಿದನು!
ನೆರೆದ ಸಂದಣಿಯಲಿ ಹಬ್ಬ ಹುಣ್ಣಿಮೆಯಲಿ
ಕುವರಿ ಕಾಣಳೇಕೆ?—ಅರಿಯದಾದನು!

ಮುಡಿಪು ನೋಂಪುಗಳಲಿ ನುಡಿ ಹಸಾದಗಳಲಿ
ನಾಡಿನರಿಕೆಗಾಯ್ತು ದೈವಸಮ್ಮತಿ !
ವರುಷ ವರುಷವಿದೇ ಹೆಚ್ಚಿ ಹರಿಯಲೆಂದು
ಮಂದಿ ಮನ್ನಣೆಯಲಿ—ಬೆಳಗಿತಾರತಿ !

೨

ಊರ ಹಿರಿಯನವನ ಮುದ್ದು ಕುವರಿಯಾಕೆ—
ಮಮತೆಯೊಂದೆ ಕಂಡು ಬೆಳೆದ ಕನ್ನಿಕೆ !
ಬೆಳಗು ಬಯಲಿನಲ್ಲಿ ಕಾಡ ಕುಸುಮವೊಂದು
ತನಗೆ ತಾನೆ ನಚ್ಚಿ ನಗುವ ಚೆಲುವಿಕೆ !

ಬಳುಕು ಮೈಯಬಳ್ಳಿ ಸೊಗಸು ಮೂಗಿನೆಸಳು
ಕುಲುಕು ನಗೆಯನೋಟದಮಲ ಜೀವನ
ತಿಣ್ಣ ತುಟಿಯ ಚಿಗುರು ನುಣುಪು ಕೆನ್ನೆವೊಗರು
ಲಜ್ಜೆಯುಗುವ ಮುದ್ದುಮನಸಿನುಪವನ !

ಅನಿತುನಾಡ ಜನರ ಕಾಮ ಕಲ್ಪನೆಯಲಿ
ಒಂದೆ ರೂಪನಿಂತು ಮೆಚ್ಚಿ ಮೆರೆದಿದೆ
ಹರಯ ಹುಮ್ಮಿನೆದೆಯ ಕಣಿವೆ ಕಿಬ್ಬದಿಯಲಿ
ಒಂದೆ ಗುಣದ ಗೆಲವಿನಿಂಪು ಹರಿದಿದೆ

ಮಂಜು ಮುಸುಕಿದಲರ ಮಧುರ ಸಂಗಕಾಗಿ
ಎನಿತು ಭೃಂಗ ಬಳಲುತಿಹುದು ಸುಮ್ಮನೆ !
ಬಾನಿನಳತೆಯೇನು ಕಡಲಿನಾಳವೇನು—
ಸೊಗಸುಗಂಡ ಜೀವಕೊಂದೆ ಸಾಧನೆ !

ಮುರುಕು ಜೋಪಡಿಯಲಿ ಗೆಳೆಯ ಗೊಲ್ಲನೊಬ್ಬ
ಕೈಯ ಕೊಳಲನೂದಿ ಹಾಡುತಿರುವನು

ಹಿರಿಯ ಗೌಡನವನ ಮನೆಯ ಬೆಳಕಿನತ್ತ
ನಲುಮೆ ನೋಟವೈಸಿ ನೋಡುತಿರುವನು
ನೋಡಲೊಮ್ಮೆ ಬಯಕೆ ನೋಟ ಮಿಂಚಿದಾಗ
ಪೆರತು ಬಾನಬೆಳಕು ಮತ್ತೆ ತೋರದು !
ಕೂಡಲೊಮ್ಮೆ ಬಯಕೆ ಕೂಡಿ ಮೆಚ್ಚಿದಾಗ
ಬಗೆಯ ಭೋಗದೆಣಿಕೆ ಮತ್ತೆ ತೀರದು !

ಅವನ ಕೊಳಲ ಗೀತೆ ಬೆಳಗು ಬೈಗುಗಳಲಿ
ತಳುಹಿ ತಳುಹಿ ತೇಲಿ ಕೂಡುತಿರುವುದು
ಅವನ ಮೂಕಮುನುತೆ ದಿಕ್ಕು ದಿಕ್ಕುಗಳಲಿ
ಎದೆಯ ಬೇನೆಯುರುಹಿ ಬೇಡುತಿರುವುದು
ದಿನವು ದಿನವು ಹಾಡ ಹೊನಲು ಹರಿಯುತಿಹುದು
ಹೊನಲ ವೀಚಿಯೊಂದು ಕರೆಯ ಸೋಂಕದೆ ?
ಕನಸಿನೂರಿನಾಚೆ ಬಳೆದ ಪೈರಿಗಾಗಿ
ಬಯಕೆ ಬೇಲಿಕಟ್ಟಿ ಕಾದು ಕುಳಿತಿದೆ !

ಇಂದು ದಿನದ ಜಾತ್ರೆಗೊಲಿದ ಮೆಲ್ಲಡಿಯನು
ಮಾಣದೊಂದು ಮನಸಿನಾಸೆ ಬಿಗಿದಿದೆ
ನಡೆವ ದಾರಿಯುಳಿದು ನಲುಮೆ ತೋರಿದತ್ತ
ಗೈಮೆ ಗರಿಯನೆತ್ತಿ ಬಾಳು ಚಿಗಿದಿದೆ !
ಮನದ ಮುನ್ನಡೆಯಲಿ ಕೊನೆಯ ಸೇರಿದಾಗ
ಜೀವ ಭೇದದೆರಡು ಕಲ್ಪ ಕಳೆಯದೆ ?
ಹೃದಯದಿತ್ತಡಿಯಲಿ ತೆರೆಗಳುಕ್ಕಿದಾಗ
ಪ್ರೀತಿಯೊಂದೆ ಮಿಡುಕಿ ಮಾತನಾಡದೆ ?

'ದಿನದ ವೊದಲ ಹೊತ್ತು ಭುವಿಯ ಭಾಗ್ಯಕಿಳಿದ
ಹೊಸತು ಸುಗ್ಗಿಯಂತೆ ನಿನ್ನ ಕಂಡೆನು !

ಬನದ ಶೂನ್ಯತೆಯಲಿ ಸುಯ್ವ ಕುಕಿಲಿನಂತೆ
ಅದನೆ ಹಾಡಿ ಹಾಡಿ ಹರುಷಗೊಂಡೆನು!

ದಿನದ ಕೊನೆಯ ಹೊತ್ತು ಸಂಜೆಗನ್ನಡಿಯಲಿ
ಮಿನುಗುತಾರೆಯಂತೆ ನಿನ್ನ ಕಂಡೆನು!
ಕನಸು ನೆನಸಿನಾಳದೆದೆಯ ಜಾಗರಣೆಯಲಿ
ಅದನೆ ನೋಡಿ ನೋಡಿ ತಪಸುಗೊಂಡೆನು!

ಇನಿತು ದಿನದ ಮೇಲೆ ನಚ್ಚಿನೆನೆದ ಮೂರ್ತಿ
ಸಗ್ಗದೆಲ್ಲೆ ಮೀರಿ ಬರಲು ಮೆಚ್ಚಿತೆ?
ಅಳಿಸಲುಳಿಸಲಿನ್ನು ನೀನೆ– ಎನಿಸಿದಾಗ
ಕರುಣೆಯೊಂದು ನಿಮಿರಿ ಮನಸು ಚುಚ್ಚಿತೆ?'

ಮಾತನಾಡಲಿಲ್ಲ– ಮುನಿದು ನೋಡಲಿಲ್ಲ
ಗಳಿಗೆ ಹೊತ್ತು ಬರಿದೆ ನಿಂದು ಬಗೆದಳು
ಕತ್ತಲೊದಗಿದಾಗ ಮುದ್ದು ನಗೆಯ ಹೊಮ್ಮಿ
ತಳಿರು ತುಟಿಯನೆತ್ತಿ ಕಣ್ಣು ಮುಗಿದಳು!

ವಿಶ್ವ ಮಂದಿರದಲಿ ಚಾರು ಚಂದ್ರ ಬಿಂಬ
ಮುಗಿಲ ಮರೆಯನುಳಿದು ನಗುವ ಸಮ್ಮತಿ!
ಸೊಬಗಿನಿರುಳ ರಾಣಿ ಬಾನ ತಳಿಗೆವಿಡಿದು
ಮಧುರ ಮಿಲನಕೊಲಿದ—ಮಂಗಳಾರತಿ!

೨೪—೬—೧೯೪೦

---

## ನಿರೂಪ

ಮುಂಜಾವ ಮುಂಚಿತಕೆ ನಿನ್ನ ನೆನಪಾಗಿ ಮಧು
ಕುಂಜದಲಿ ಕೋಗಿಲೆಯು ಕೂಗಿರುವುದಂತೆ
ಕಂಜ ಕಾಮಿನಿಯ ರಸಮಂದಿರದ ಬಾಗಿಲಲಿ
ಗುಂಜದಳಿಗಾನ ಗುಂಪಾಗಿರುವುದಂತೆ

ಬೆಳಗು ಹೊತ್ತಿನ ಬೆಳ್ಳಿ ಬೆಳಗಿ ತೊಳಗಿತು ನಸುಕಿ
ನೆಳನಗೆಯ ನೋಟ ದೆಸೆಗೊದಗಿರುವುದಂತೆ
ಗಳಿಗೆ ಬದುಕಿನ ಭೋಗದೊಳಿತು ಪಯಣಕೆ ಕೋಳಿ
ಮೊದಲ ಕೂಗಿನ ಕಹಳೆಯೂದಿರುವುದಂತೆ

ಮಮತೆ ಮೌನದ ಮನಸಿನೆಸಳು ತೊಟ್ಟಿಲ ತೂಗಿ
ಉದಯರಂಗನ ಹಾಡು ಹಾಡಿರುವುದಂತೆ
ಎದೆಯ ಕೊಳಲಿನ ಮೇಳ ಮೊಲಿತು ಮೆಲ್ಲುಲಿಯಾಗಿ
ಕುಸುಮ ಕೋಮಲೆಯ ಮುದ್ದಾಡಿರುವುದಂತೆ

ನಕ್ಕು ನೋಡಿದ ನೋಂಪು ನೋಡಿ ನಚ್ಚಿದ ಪವಪು
ನಚ್ಚಿನೆಣೆವಕ್ಕಿ ನಲಿದಾಡಿರುವುದಂತೆ
ಅಕ್ಕರೆಯ ಸಿಸುಮಾತು ಮಾತಿಗೊಪ್ಪಿದ ಮುತ್ತು
ಅಚ್ಚರಿಯ ಸೃಷ್ಟಿ ಹೊಸತಾಗಿರುವುದಂತೆ

ಬೆಳಗೆದ್ದ ಬಾಳು ತಾ ಕಳವಳಿಸಿ ಭಾವನೆಯ
ಬೆರಳಿನಲಿ ದಿನದೆಣಿಕೆಗೊಂಡಿರುವುದಂತೆ
ಕಳೆದಿರುಳ ಕನಸಿನೊಂದಿನಿನೋಟ ಕಣ್ಣ ಕೊನೆ
ಯಳತೆಯಲಿ ಕಲೆತು ಕುಣಿದಾಡಿರುವುದಂತೆ

ಆರು ಕಾಣದ ಮನಸಿನೇರಿಳಿತಗಳಲಿ ಕ—
ಣ್ಣೀರ ಹಾಯಿನ ಹಡಗು ಹೊರಳಿರುವುದಂತೆ
ನೂರು ಗಾವುದ ಪಯಣದೂರಿನಾ ಕಡೆಗಾಗಿ
ದಾರಿ ಹೋಕರು ಕಾದುಕುಳಿತಿರುವರಂತೆ

ಇರುಳು ತೋರುವ ಮುನ್ನ ಕರುಳು ತಣಿದಪುದೆಂಬ
ಬೆರಸು ಬಯಕೆಯ ತುಂಬಿ ಮರುಗಿರುವುದಂತೆ
ಹಗಲಿಗೊದಗದ ಹಾದಿ ಇರುಳಿಗಾಗುವುದುಂಟೆ?
ಹಗಲಿರುಳು ಹಲುಬಿ ಬೆಂಡಾಗಿರುವುದಂತೆ

ಮನಸಿನೇನಿದು ಮಾತು! ಕದಪಿನಲಿ ಕದಪಿಟ್ಟು
ಕೊಳುವ ಕಮ್ಮನೆಗಾಗಿ ಕಾದಿರುವುದಂತೆ
ಬಿರುಕು ಬಿದಿರಲಿ ಬಾರದಿರುವ ಭಾವನೆಗಾಗಿ
ಬರಿದೆ ಗಾಳಿಯನೂದಿ ಬಳಲಿರುವುದಂತೆ

ಬಾಳು ಬರಿದಾದಾಗ ಬಯಕೆ ಬಾಳುವುದುಂಟು
ಬಯಕೆಗಾಗಿಯೆ ಬದುಕು ಬೇಯಲಿದೆಯಂತೆ
ಕೂಳು ಕುದಿಕುದಿವನಕ ಬಯಕೆ ಕೆಂಗಿಡಿಯೊಂದೆ
ಕಾಲಕಾಲಕು ಬಾಳನುರಿಸಲಿದೆಯಂತೆ

ಬಾಳಲಾರದ ಬದುಕು ಸಾಯಲಾದರುಬೇಕು
ಸಾವು ದುಃಖಕೆ ನೆರೆವ ಸತಿಯು ಸುಖದಂತೆ
ಬಾಳ ಸೂಳೆಯು ಸರಸ ಸಂಗ ವಂಚಿಸಲುಂಟು
ಸಾವು ಬೆಂಬತ್ತಿ ಬಹ ನೆಳಲ ಪಡಿಯಂತೆ

ಹುಟ್ಟು ಮೊಳಕೆಯು ಬಯಕೆ ತೊಟ್ಟಿಲನು ತೂಗಲಿಕೆ
ಮೃತ್ಯು ಮೋಹಿನಿಯೊದಗಿ ಬಂದಿರುವಳಂತೆ
ಕಟ್ಟಿರುಳ ಕೋಣೆಯಲಿ ಬಟ್ಟ ಬಲ್ಮೊಲೆಯೂಡಿ
ಬಳಲಿಕೆಯ ನೋಲೈಸಿ ಬಿಗಿದಿರುವಳಂತೆ

ಮುಂಜಾವ ಮುಂಚಿತಕೆ ನಿನ್ನನೆನಪಾಗಿ ಹೃತ್
ಪಂಜರದ ಕೋಗಿಲೆಯು ಕೂಗಿರುವುದಂತೆ
ಹಿಂಗದಾರಡಿಯ ನಿಸ್ಸಂಗ ಮೌನ ನಿರೂಪ
ಮೃತ್ಯು ಮಂದಿರಕೆ ಮುಡಿಪಾಗಿರುವುದಂತೆ!

೧೭—೬—೧೯೪೧

## ಕವಿಯ ಹಾಡು

೧

ಕವಿಯಾಗಿ ಕಂಡಿರುವೆನೇನು ?
ಜೀವನದ ಬೆಳಗಿನಲಿ–
ಕವಿಯಾಗಿ ಕಂಡಿರುವೆನೇನು ?
ದಿನದವೊದಲಿನ ನಸುಕು ನಗೆಯ ಹೊಂಬೆಳಕಿನಲಿ
ಹೊಸ ನೋಟ ಕೂಡಿರುವೆನು
ನನೆಮನೆಯ ಜೇನುಣಿಯ ಸರಸ ಸಂಗೀತದಲಿ
ಸವಿ ಮಾತನಾಡಿರುವೆನು
ಆಗಸದ ಹಿರಿದಗಲದಾಕಡೆಯ ನೆಮ್ಮದಿಯ
ಬಾನಾಡಿಯಾಗಿರುವೆನು
ಭಾವನೆಯುಗರಿಗೆದರಿ ರಾಗರಂಜನೆಯೈಸಿ
ಹಾಡಿ ಕುಣಿದಾಡಿರುವೆನು
ಮುಂಜಾವ ಮುಗಿದಾಗ ಗರಿಸೋತು ಸುಗಿದಾಗ
ವಿರತಿಗೊದಗುವ ಗೂಡು ಕಳೆದಿರುವುದಲ್ಲ !
ಕವಿಯಾಗಿ ಕಂಡಿರುವೆನೇನು?

೨

ಕವಿಯಾಗಿ ಕಂಡಿರುವೆನೇನು ?
ಜೀವನದ ಬೈಗಿನಲಿ—
ಕವಿಯಾಗಿ ಕಂಡಿರುವೆನೇನು ?
ಸಂಜೆ ಸಿಂಗಾರದಲಿ ಸ್ವರ್ಗ ಪಾತಾಳದಲಿ
ಹೊಸ ಹುಚ್ಚು ಹೂಡಿರುವೆನು
ಕಂಜ ಕಂಜಂಗೆಳೆದೆಯಕ್ಕರೆಯನೋಲೈಸಿ
ಹೊಸ ಬೆಳಕು ನೀಡಿರುವೆನು

ಅಳಲು ಬಳಲಿಕೆ ಬೇನೆ ಬವಣೆಗಳ ಗಡಿದಾಂಟಿ
ಹೊಸ ದಾರಿ ತೋರಿರುವೆನು
ಚೆಲುವು ಗೆಲವಿನ ಗುರಿಯ ಗೆಳೆತನದ ನಿಚ್ಚಟದ
ಹೊಸ ಸೃಷ್ಟಿ ಸಾರಿರುವೆನು
ಕೊನೆಯೊದಗೆ ಮುಚ್ಚಂಜೆ ಮುಸುಕಿದಾ ದಾರಿಯಲಿ
ಬದುಕಿಗಾಗುವ ದೀಪ ನಂದಿರುವುದಲ್ಲ !
ಕವಿಯಾಗಿ ಕಂಡಿರುವೆನೇನು ?

೩

ಕವಿಯಾಗಿ ಕಂಡಿರುವೆನೇನು ?
ಜೀವನದ ಧಾಟಿಯಲಿ —
ಕವಿಯಾಗಿ ಕಂಡಿರುವೆನೇನು ?
ಸೊಬಗು ತಿಂಗಳಿನಿರುಳ ತಿಳಿ ಹೊಳೆಯ ತೀರದಲಿ
ಕಲಕಲತೆಯಾಗಿರುವೆನು
ಸುಳಿವ ತೆಂಗಾಳಿಯಲಿ ಕೋಕ ಕಲ್ಪನೆಗೊದಗಿ
ಬೆಂದೆದೆಯ ತೂಗಿರುವೆನು
ಕಡಲಿನೇರಿಳಿತಗಳ ಸಾಮುತಾಮುಸಗಳಲಿ
ಸರಿ ಸಮತೆಯೊಪ್ಪಿರುವೆನು
ಸಾವು ಕಹಿ ಕಿಸುರಿನಲಿ ಸಂತಸದ ಸವಿದೋರಿ
ಶೂನ್ಯತೆಯನಪ್ಪಿರುವೆನು !
ಬದುಕಿನಲಿ ಬೆಚ್ಚರದ ಕಾಳರಾತ್ರಿಯು ನೆರೆಯೆ
ಪಯಣಕಾಗುವ ಹಡಗು ಕಾಣದಿದೆಯಲ್ಲ !
ಕವಿಯಾಗಿ ಕಂಡಿರುವೆನೇನು ?

---

೧೭—೧೧—೧೯೪೧

# ಮಲ್ಲಿಗೆ--ಸಂಪಗೆ--ಜಾಜಿ

೧

ದಿನಮಾನದ ಮೊದ ಮೊದಲಿನ
ತೆರೆಸರಿದಿಹುದತ್ತ
ಮುಂಜಾವದ ಕುಡಿನೋಟದ
ಸಿರಿ ಹರಿದಿದೆ ಸುತ್ತ
ದೆಸೆದೆಸೆಗಳ ದಾಂಗುಡಿಯಲಿ
ನಸು ಮೂಡಿತು ಬೆಳಕು
ಕೊನೆಯಿರುಳಿನ ಮಂದಿರದಲಿ
ಮಿಡುಕಾಡಿತು ಬದುಕು

ಲತೆ ಲತೆಗಳ ಮೈ ಯಲುಕಿಸಿ
ತಂಗಾಳಿಯು ಸುಳಿದು
ಹೊಸ ಬಾಳಿನ ಧಿಮಿಧಿಮಿತಕೆ
ಕೈಗೂಡಿತು ಕರೆದು
ಎಳದಳಿರಿನ ಮಿದುವಾಸಿನ
ಮಲ್ಲಿಗೆ ಕಣ್ದೆರೆದು
ಚೆಲುದುಟಿಗಳ ಮುದ್ದೆಸಳಲಿ
ನಗೆಯೈಸಿತು ಬಿರಿದು!

ಆ ಮೌನದ ಮಿದುನಗೆಯಲಿ
ತೇಲಿತು ಸಂಸಾರ!
ಆನಂದದ ಮಕರಂದದ
ಮಮತೆಯ ಶೃಂಗಾರ!
ಎಳಮಾವಿನ ಮರಿಕೋಗಿಲೆ
ಎಲೆ ಮುಸುಕನು ಸರಿಸಿ

ಹೊಸ ಹಾಡಿನ ಕೃತಿಗಮಕಕೆ
ಕೂಡಿತು ದನಿಯೈಸಿ!

ಮುಂಜಾವದ ಮಧುರಿಮೆಯಲಿ
ಮೆಚ್ಚಿದ ಹುಮ್ಮನಸು
ನೆನೆ ನೆನಸಿನ ಕಣ್ ಕನಸಿನ
ಬಿಗಿತದ ಸವಿ ಬೆರಸು

ಚೆಲುತನದಲಿ ತಿಳಿಮನಸಿನ
ಮೆಲ್ಲಿತು ನಗೆ ಸೊಗಸು!
ಗರಿವೆಳಗಿನ ಶಾದ್ವಲದಲಿ
ಕಿರುವೊನಲಿನ ಸೂಸು!

೨

ಕಳೆಯಿತು ನಸುಕು ತುಂಬಿತು ಬೆಳಕು
ತುಂಬಿತು ಬೆಳ್ಳನೆ ಬಿಸಿಲು
ಬದುಕಿನ ಬಯಲ ಭಾವದ ಹೊನಲ
ತೂಗಿತು ತೆನೆಗಳ ಸಾಲು!

ಒಳಮಾತಿಲ್ಲ ಮೌನವು ಸಲ್ಲ
ಬೆಳಕಿದು ಬಿಚ್ಚಿದ ಮನಸು
ನಡೆಯೊಂದೇ ನುಡಿ ತೋರುವ ಕನ್ನಡಿ
ಬೆಳಕಿದು ಬಾಲೆಯ ಮುನಿಸು

ಆ ಕಡೆ ಬನದ ಹೆಡತಲೆಯೇರಿ
ತೋರಿದೆ ಸಂಪಗೆಯರಳು
ಬೆದರದ ಬಗೆಯೋ ನಾಚದ ನಗೆಯೋ—
ತೂಗಿದೆ ಜತನದ ಬೆರಳು!

ಗಿಳಿಗಳ ಬಳಗ ಹಾರಿತು ಮುಂದೆ
ಸಾರದು ತುಂಬಿಯು ಬಳಿಗೆ
ದೆಸೆ ದೆಸೆಯತ್ತ ಕಂಪಿನ ಕಲಸು
ತುಂಬಿತು ಬಾನಿನ ತಳಿಗೆ

ಬಿಸಿಲಿನ ಬೇಗೆ ತುಂಬಿತು ಸೋಗೆ
ಮರೆತಿದೆ ಮೆಚ್ಚಿನ ಕುಣಿತ
ಬಾಳಿನ ಬಯಕೆ ತೀರದ ಕತಕೆ
ಕುದುರಿದೆ ಪರಮೆಯ ಗೀತ

ನಗುತಿಹುದೊಂದೇ ವಿಶ್ವದ ಮುಂದೆ
ಸಂಪಗೆ ಸೋಲದ ಬದುಕು
ಮನಸಿನ ಮೆಚ್ಚು ಹರಯದ ಹುಚ್ಚು
ತನ್ನದೆ ತನಗೇ ಬೇಕು!

೩

ನಲಿದು ಬಂದಳಿತ್ತ ಕಡೆ
ಸೊಬಗು ಸಂಜೆ ಸಿಂಗಾರಿ
ಕಡಲ ಕೊನೆಯ ತುರುಗು ಪಡೆ
ತೆರೆಯ ತೆಪ್ಪದೆದೆಯೇರಿ

ಕಿರಿದು ಹಕ್ಕಿ ಕಲಕಲತೆಯ
ಗಿಳಿರು ಗೆಜ್ಜೆ ಗುಲುಗುಲಿಸಿ
ಬದುಕಿನತ್ತ ಬಳಲಿದೆದೆಗೆ
ಸೊಗಸು ನೋಟದನುವರಿಸಿ

ಹಲವು ಹಿತದ ಹೂವುಗಳಲಿ
ಮನಸಿನಾಳದೊಳ ಹೊಕ್ಕಿ–

ಹಲವು ಕತದ ನೋವುಗಳಲಿ
ಸೆರಗಿನೊಂದು ಮುಸುಕಿಕ್ಕಿ
ಗೆಲವು ಸೋಲು ಗೈಮೆಗಳಲಿ
ಸೊಗಸಿನೊಂದೆ ಕಲೆಯಡರಿ
ನಲಿದು ಬಂದಳಿತ್ತ ಕಡೆ
ಸೊಬಗು ಸಂಜೆ ಸಿಂಗಾರಿ !

ಮುಗುದತನದ ನಿದ್ದೆಯೊದವಿ
ದೆಸಳು ಜಾಜಿ ಮೊಗವೆತ್ತಿ
ಕುಸುರು ನಗೆಯ ಕಮ್ಮನೆಯಲಿ
ತಿರೆಯ ತುಂಬಿದಾ ರೀತಿ !
ತೊಳಲುಗಾಳಿ ಗಳಿಗೆ ನಿಂತು
ನೋಡಿದತ್ತು ವೈ ಮರೆದು !
ಕೆಲದ ಕೊಳದ ಕಮಲವಿಂತು
ಬಾಡಿತೇಕೊ ಸೈಗರೆದು!

ಮುಗಿದ ಹಾಡು ಮುಗುಳೆ ಮೂಡಿ
ತೀವಿತೇನು ಝೇಂಕಾರ !
ಅಳಿಗಳೆದೆಯ ರಾಗರತಿಯ
ನಿರವಧಿಕ ಮಮಕಾರ !
ಸಂಜೆವೆಣ್ಣ ಸೊಗಸು ವಿಾರಿ
ಮೆರೆದುದೋದೆ ನರುಗಂಪು !
ಕೊನರಿದಿರುಳ ಜೀವನದಲಿ
ನೆರೆಯಲದೇ ಸವಿನೆನಪು !

ಮುಂಜಾನೆಯೊ ನಡುಹಗಲೊ–
ಮುಸ್ಸಂಜೆಯೊ ತಿಳಿಯದಿದೆ–

ದಿನವಳಿಯಲು ಕನಸಿನ ಕಣ್
ತೊಟ್ಟಲಿ ಹೂವರಳುತಿದೆ!
ಹಗಲಿರುಳೂ ಮುಗಮುಗಿಸಿದೆ
ಮಲ್ಲಿಗೆ-ಸಂಪಗೆ-ಜಾಜಿ!
ಮೃದು ಮಮತೆಯ ಮನ್ನಣೆಯಲಿ
ತೂಪಿಟ್ಟಿದೆ ಸುಮರಾಜಿ!

೭—೨—೧೯೪೨

---

# ...............ರೆ

೧

ನಾನು ನೀನೊಂದಾಗಿ ಮೆಚ್ಚಿ ಮುದ್ದಾಡಿದರೆ—
ಸವಿಸೊದೆಯ ಸಿಂಗಾರ ಸೋನೆ ಹರಿದೀತು!
ನಾನು ನೀನೊಂದಾಗಿ ಕೂಡಿ ಕುಣಿದಾಡಿದರೆ—
ನಲುಮೆ ನೇವುರವು ನಲಿದುಲಿದು ನೆರೆದೀತು!

೨

ನಾನು ನೀನೊಂದಾಗಿ ಮಲಿತು ಮೈಗೂಡಿದರೆ—
ಚೆಲುವು ತಂಗದಿರ ಬಾವನ್ನ ಬೆಸೆದೀತು!
ನಾನು ನೀನೊಂದಾಗಿ ನಕ್ಕು ನಲಿದಾಡಿದರೆ—
ತೊಳಲು ತಂಗಾಳಿ ತನಿಯೊಸಗೆ ತುಂಬೀತು!

೩

ನಾನು ನೀನೊಂದಾಗಿ ಹುಚ್ಚು ಹುಚ್ಚಾಡಿದರೆ—
ಸೊಗಸು ಸಗ್ಗವೆ ಹಿಗ್ಗಿ ಮರುಳುಗೊಂಡೀತು!
ನಾನು ನೀನೊಂದಾಗಿ ಬಗೆ ತಣಿದು ತೇಗಿದರೆ—
ಭವದ ಬೇಗುದಿಯು ಬರಸತ್ತು ನಂದೀತು!

೪

ನಾನು ನೀನೊಂದಾಗಿ ಮಮತೆ ಮನವರಿಸಿದರೆ—
ಹಿರಿದು ಬಾನಳತೆ ಕೈಗೇಣಿಗೊದಗೀತು !
ನಾನು ನೀನೊಂದಾಗಿ ಕಲೆತು ಕನವರಿಸಿದರೆ—
ಹಳೆಕತ್ತಲಳಿದು ಹೊಸ ಬೆಳಕು ಹಬ್ಬೀತು !

೫

ನಾನು ನೀನೊಂದಾಗಿ ಭವರಂಗವೇರಿದರೆ
ಬದುಕು ಬಿನ್ನಣದ ಭಂಡಾರ ಬಿಚ್ಚೀತು !
ನಾನು ನೀನೊಂದಾಗಿ ರಸರಾಜ್ಯವಾಳಿದರೆ—
ಕಾವ್ಯಕಲ್ಪನೆಯ ಸೌಭಾಗ್ಯ ಹೆಚ್ಚೀತು !

೧೩—೮—೧೯೪೨

---

## ಕನಸು

೧

ದಿನದ ನನೆಯೂರಿನಲಿ ಮೊದಲ ಪಾತರವಾಗಿ
ಗರಿಗೆದರಿ ನಲಿದಾಡಿದೊಲುಮೆ ನೆನಪುಂಟೆ ?
ಮನಸು ಮಾತಿನ ಮಧುಗಮಮತೆ ಮಧುಕರಿಯಾಗಿ
ಗುಣುಗುಣಿಸಿ ಗುಂಜಾಡಿದೊಲವು ನೆನಪುಂಟೆ ?

ಹೊಂಬಿಸಿಲ ಹೊಲಗಳಲಿ ತೆನೆಗಳುಯ್ಯಲೆಯಾಗಿ
ಬಿಗಿದ ತೋಳಲಿ ತೂಗುಗೊಂಡ ನೆನಪುಂಟೆ?
ತಂಗಾಳಿ ತೆರವಿನಲಿ ಬಿರಿದ ಮಲ್ಲಿಗೆಯಾಗಿ
ತೆರೆ ತುಟಿಯನೆತ್ತಿ ಸವಿಯುಂಡ ನೆನಪುಂಟೆ ?

ಬನಸಿರಿಯ ತಿಳಿತನದ ತೊದಲು ಕಿರುವೊನಲಾಗಿ
ಹಿತವಾಡಿ ಹರಿದ ಹುಚ್ಚಾಟ ನೆನಪುಂಟೆ ?

ತಳಿರು ತೆಳ್ಳುಡಿಯು ಕರೆಕರೆವ ಕೋಗಿಲೆಯಾಗಿ
ಉಲಿದುಲಿದು ಕಲೆತ ಕೊಂಡಾಟ ನೆನಪುಂಟೆ ?

ಶೃಂಗಾರ ಸಾಗರದ ಸೊಗಸಿನಲೆಯುಲೆಯಾಗಿ
ಹೊಸ ಹುಮ್ಮನೊರತೆಯಲಿ ನನೆದ ನೆನಪುಂಟೆ?
ಸಂಜೆಯನುರೋಧದಲಿ ಮುಗಿಲ ಜವನಿಕೆಯಾಗಿ
ಮೌನದಲಿ ಮಮತೆ ಮುತ್ತರಿದ ನೆನಪುಂಟೆ ?

ಇರುಳಿರುಳ ಕಾವಲಿನ ಕನಸಿನೆಚ್ಚರವಾಗಿ
ಕಾದು ಕಲ್ಪನೆಗೊಂಡ ನೋಂಪು ನೆನಪುಂಟೆ ?
ಭವದ ಬಾನಂಗಣದ ಮಿನುಗು ತಾರಕೆಯಾಗಿ
ಸೊಗದ ಸಜ್ಜೆಗೆ ಸಂದ ಸೇವೆ ನೆನಪುಂಟೆ ?

೨

ಭವದ ನಡೆಯತ್ತಕಡೆ ನೆನಪುನೋಟವು ಮಿಂಚಿ
ಕಳೆದೆಣಿಕೆಗಳ ಕನಸು ಕಾಣುತಿಹ ರೀತಿ
ಬದುಕು ಸೊಗಸನು ಕೂಡಿ ಕಣ್ಣ ಮುಚ್ಚಲೆಯಾಡಿ
ಕಲ್ಪಕಲ್ಪಂಗಳನು ತೂಗುತಿಹ ನಿಯತಿ !

ಬಯಕೆ ಗರಿಗಳನೆತ್ತಿ ಹಾರುವೆಣಿಕೆಯ ಹುಚ್ಚು
ಬಾನಿಗೂ ಹಿರಿದಾದ ಹಸಿದ ಹುಮ್ಮನಸು
ಬಯಕೆಬಾಳನು ಬಿಗಿದು ಗಾಳಿಯಾಡಿದ ನಚ್ಚು
ಸತ್ಯಕೂ ಮಿಗಿಲಾದ ಜೀವನದ ಕನಸು !

೧೦—೧೧—೧೯೪೨

---

## ಕರೆ

ಬರೆವ ದಿನವೇಕಿನ್ನು ಬಂದಿರುವುದಿಲ್ಲ-ಭಾ-
ವನೆಗಳಲಿ ತುಂಬಿಹುದು ತುಳುಕುತಿಳಿ ನೇಹ
ಮನಸು ಮೊನೆ ಚೂಲಿಕೆಯ ತುದಿಯತ್ತ ನೇವರಿಸಿ
ಮಮತೆಯಲಿ ನಿಂದಿಹುದು ಬಾಳಿಕೆಯ ವಿರಹ

ಮಮತೆಗೇದಿನ ಬೆಲೆಯ ಕೊಟ್ಟು ಕಾದಿರಬೇಕು
ಹರಯ ಹರದಾರಿಯಲಿ ನಿಂದಿರುವೆನಲ್ಲ !
ಕನಸು ಮನಸಿನ ಕರೆಯ ಮಧುರಾಂತರಾಳದಲಿ
ನೆನಪು ನಂದಾದೀಪವಿರಿಸಿರುವೆನಲ್ಲ !

ಆಸೆತೊಟ್ಟಿಲ ತೂಗಿ ಜೋಗುಳಾಡಿದ ಹಾಡು
ಹಲುಬು ಹೃದಯದ ಗಮಕವಾಗಿರುವುದಲ್ಲ !
ಮನಸಿನೇರಿಳಿತಗಳ ಹಾಸುಹೊಕ್ಕಿನ ಜೋಡು
ಸುರಿವ ಕಂಬನಿಯಾಗಿ ಹರಿದಿರುವುದಲ್ಲ !

ಪ್ರೀತಿಯೊಂದೇರಮ್ಯರಸರಂಗಧಾಮದಲಿ
ರಾಜ್ಯವಾಳಿದ ರೀತಿ ಮರೆಯದಿಹುದಲ್ಲ!
ರಾಜ್ಯರಾಜ್ಯಂಗಳಲಿ ತುಮುಲುತೆರೆತೆರೆಯಾಡಿ
ಹೃದಯವಿದು ಕಲ್ಪಾಂತವಾಗಿರುವುದಲ್ಲ!

ದಿನದೂರ ಪಯಣದಲಿ ಹಗಲೆನಿತೊ ಕಳೆದಿಹುದು
ಕಳೆದನಿತು ಕಟ್ಟಿರುಳು ಧೀರ್ಘವೇನಯ್ಯ !
ನನೆನನೆಗಳಾತುರದ ಮನವರಿದಪಾತರದ
ಕೊನೆಯ ಕರ್ಮದ ಕಲ್ಪ ತೀರದೇನಯ್ಯ !

ಬರೆವ ದಿನವೇಕಿನ್ನು ಬಂದಿರುವುದಿಲ್ಲ-ಭಾ-
ವನೆಯು ಬರಿಬಾನಕಡೆ ನೋಡುತಿದೆಯಲ್ಲ !

ಭವರಂಗದಲಿ ಬಿಗಿದ ಬಯಕೆ ತಂತಿಯ ಮೇಲೆ
ಬೆರಳಿರಿಸಿ ಬದುಕು ಗುಣುಗುಣಿಸುತಿದೆಯಲ್ಲ !

೧೬—೩—೧೯೪೩

## ವೃಂದಾವನ

೧

ಗೋಕುಲದಲಿ ಕೋಗಿಲೆಯದೊ—
ಕೂಗಿದೆ ಮನಸಾಗಿ
ಕಾಕಲಿಯಲಿ ಕಲೆಕಲೆಯಿಸಿ
ಕೂಗಿದೆ ಮುದ್ದಾಗಿ

ಆ ಕಡೆಯಲಿ ಈ ಕಡೆಯಲಿ
ತುಂಬಿದೆ ನವಗೀತಿ
ದೆಸೆದೆಸೆಯಲಿ ಬಾವನ್ನದ
ಸಿರಿ ಚೆಲ್ಲಿದ ರೀತಿ !

ಆ ಬಯಲಿನ ಕೊನೆಕುಂಜದೆ
ಕರೆಯೈಸಿತು ಕೊಳಲು
ಕಿರುದೆರೆಗಳ ಕಲ್ಪನೆಯಲಿ
ಧಿಮಿ ಧಿಮಿಸಿತು ಹೊಳಲು

ಮನೆ ಮನೆಗಳ ಕದಕುಲುಕಿಸಿ
ಕಾದಿದೆ ಹೊಸಸೂಳು
ಮಧುಸಂಗದ ಕಾತರದಲಿ
ಮಿಡುಕಾಡಿದೆ ಬಾಳು

ಮಿದು ಮನಸಿನ ಸುಲ್ಲಿಗೆಯಲಿ
ಮೂಡಿತು ಸಿಂಗಾರ

ನನೆಕನಸಿನ ಕಲ್ಪನೆಯಲಿ
ಸೊಗಸಿನ ಸಂಚಾರ!
ತೆರೆಮುಸುಕಿನ ಕರೆಯೊತ್ತಿಸಿ
ನಡೆ ನೋಡಿತು ಹೃದಯ
ಭವಭೀತಿಯ ಸೆರೆಬಿಗಿತದ
ಕರೆಮಿಾರಿದ ವಿಜಯ

೨

ಅದೊ! ಬಯಕೆಯ ನಿಟ್ಟೋಟಕೆ
ನೆರೆದಿರುವಳು ರಾಧೆ
ತನುಪುಳಕದ ಮನದಳತೆಯ
ದಡದಡಿಕೆಯ ಸೇದೆ!
ನಗೆನೋಟದ ಕಣ್‌ಕುಣಿತದ
ಮಮತೆಯ ರತಿರೂಪ!
ನವ ಜೀವನದಭಿಸಾರದ
ಮೃದುಮೌನ ನಿರೂಪ!
ಬೆರಳಟವಿಸಿ ಗುಣಿಗುಣಿಸುವ
ಕಳೆದಿರುಳಿನ ನೆನಪು
ಕೆಳೆಯಾಣ್ಮನ ತನುಸಂಗಕೆ
ತಾರುಣ್ಯದ ತೆರಪು
ಕೊನೆಸಾಗುವ ಸಡಗರದಲಿ
ಸರಿದಿದೆ ಮೇಲ್ಮುಸುಕು!
ಗುರಿಯೊಂದೇ ನಡೆನಡತೆಗೆ—
ಅದೆ ಭಾಗ್ಯದ ಬದುಕು!
ತಡೆನುಡಿಗಳ ಕಡೆಗಾಣಿಸಿ
ನಡೆದಿರುವುದು ನಾಕ!

ನಡೆಹೆಜ್ಜೆಯು ಹಿನ್ನೋಡದು—
ಹಿನ್ನೋಟವು ನರಕ !

ಮನಸೊಪ್ಪಿಸಿ ಮೈಮರೆದಿದೆ
ಮಮತೆಯ ಮಮಕಾರ !
ರಸಯೋಗದ ಸಾಯುಜ್ಯದ
ಸುಖ ಸಾಕ್ಷಾತ್ಕಾರ !

೩

ದಿನವರಳಿದೆ— ದಿನವುರುಳಿದೆ
ಹೊರಳಿದೆ ಯುಗಯಾತ್ರೆ !
ಗಡಿಗಡಿಗಳ ಕಲ್ಮೊನೆಯಲಿ
ನಡೆದಿದೆ ಜನ ಜನತೆ !

ದಿನದಿನಗಳ ಬೇಗುದಿಯಲಿ
ಬತ್ತಿದೆ ಬಗೆವೊನಲು!
ಬನಬನಗಳ ಬಾಸಣಿಯಲಿ
ಕುದುರಿದೆ ಕರೆಕುಕಿಲು !

“ಬದುಕಿನ ವೃಂದಾವನದಲಿ
ಓ—ರಾಧೆಯ ಕಂಡಿಹಿರೆ?
ನಸುವೆಳಗಿನ ಚೆಲುವಿಕೆಯಲಿ
ಓ—ರಾಧೆಯ ಕಂಡಿಹಿರೆ ?

ಕೊನೆಸಂಜೆಯ ಕಮ್ಮನೆಯಲಿ
ಓ—ರಾಧೆಯ ಕಂಡಿಹಿರೆ ?
ಬೆಳದಿಂಗಳ ತಿಳಿತನದಲಿ
ಓ—ರಾಧೆಯ ಕಂಡಿಹಿರೆ ?”

ಮನದೊಲುಮೆಯು ಮುಡಿಪಾಗಿಸೆ
ನಡೆದಿರುವೀ ಪಯಣ !
ನಡೆದನಿತೂ ನಿಡುದಾರಿಯ
ಕೊನೆಗಾಣದ ಮಸಣ !

ಎದೆಯುಸಿರಿನ ವೇದನೆಗಳ
ಹೊರೆ ಹೊತ್ತಿದೆ ಹರಣ !
ಎಲೆ ಜೀವವೆ !—ಕಂಬನಿಯಲಿ
ಬರೆ—ಕಲ್ಪದ ಕವನ !

೨೮—೩—೧೯೪೩

---

## ಬಂದಿರುವೆನು

ಹರದಾರಿ ಹರದಾರಿ ಮುಂದೆ ಮುಂದಕೆ ನಡೆದು
ಬಾಳುವೆಯ ನಡುವಿಸಿಲ ಬೇಗುದಿಯ ಹಾದಿಯಲಿ ಬಂದಿರುವೆನು
ಮೊದಲ ಬೆಳಕೊಗೆದಾಗ ಮೊದಲ ಹೂ ಬಿರಿದಾಗ
ಮೊದಲಿನಿಂಚರದ ಸವಿಗನಸುಗಳ ಹೊರೆಹೊತ್ತು ಬಂದಿರುವೆನು
ಹರಣದಲಿ ಹಸಿವಾಗಿ—ಬಯಕೆಯಲಿ ಬಾಯಾರಿ
ಗೈಮೆಗಳ ಬೆಮರಿನಲಿ ಮಿಂದು ಮೈ ಮರೆದಾಗ ಬಂದಿರುವೆನು
ನೋಟದಲಿ ನೆನವರಿಕೆ—ಮಾತಿನಲಿ ಮನದೆಣಿಕೆ
ನಡತೆಯಲಿ ಹೃದಯದಳ್ಕರಿಕೆ ಕೈ ವಿಡಿದಾಗ ಬಂದಿರುವೆನು
ತಂಗಾಳಿ ತೊಳಲಿಕೆಗೆ ತಣ್ಣೆಳಲಿನಾಸರಕೆ
ಬದುಕಿನಾಸೆಯ ಬಳ್ಳಿ ನೀಳ್ಕರಿಸಿ ನೆರೆವನ್ನ ಬಂದಿರುವೆನು
ಹೃದಯದೀಗೂಡಿನಲಿ ಪ್ರೀತಿಗುಂಜಾರವದ
ಗೀತಿಗುಂಪಾಗಿ ಸವಿಜೇನಸರಿಸುರಿವನ್ನ ಬಂದಿರುವೆನು

ಮನದ ಗಂಗೆಯು ಮೇಲೆ ಮಮತೆ ಸುಳಿಸುಳಿಯಾಗಿ
ಬದುಕಿನಲಿ ಬೆರೆಯೆ ತಡಿವರಿವ ಕಿರುದೆರೆಯಂತೆ ಬಂದಿರುವೆನು
ಹರಿಹರಿವ ಹೊನಲಿನಲಿ ಹರಯ ದೋಣಿಯನೇರಿ
ಬಯಕೆ ಚುಕ್ಕಾಣಿಗಳ ಬಿಗಿದು ಕಾದಿರುವಂತೆ ಬಂದಿರುವೆನು
ಒಂದು ಬಗೆ— ಒಂದು ನಗೆ —ಒಂದು ಲಜ್ಜೆಯ ನೋಟ
ಒಂದು ಕಲ್ಪದ ಕೊನೆಯ ಕಾವ್ಯ ಕಲ್ಪನೆಗಾಗಿ ಬಂದಿರುವೆನು
ಒಂದು ಮಾತಿನ ಲಲ್ಲೆ—ಒಂದು ಮಮತೆಯ ಮುತ್ತು
ಒಂದು ಸೊಗಸಿನ ರೂಪರಸದ ರಂಜನೆಗಾಗಿ ಬಂದಿರುವೆನು
ಬಾಳಿನೀ ಕತ್ತಲಿನ ಕಿರುಮನೆಯ ಹಂತದಲಿ
ನಗು ನಗುವ ಕೈವೆಳಗಿನೊಂದು ನಿಚ್ಚಟಕಾಗಿ ಬಂದಿರುವೆನು
ಆಸೆಯರಮನೆಯ ಮಂಜುಳ ಮನೋರಾಜ್ಯದಲಿ
ಇರಿಸಿ ನಿನ್ನನು ರಾಣಿ ! ಜಗವನಾಳಲಿಕಾಗಿ ಬಂದಿರುವೆನು.

೨೩—೬— ೧೯೪೩

---

## ರೂಪ—ರಸ

ಮುಂಜಾವದಲಿ ಮುಗುದತನದ ತೆರೆಯೋಸರಿಸಿ
ಮುಗುಳೊಂದು ಕಣ್ದೆರೆದು ನಡೆನೋಡುತಿಹುದು
ದೆಸೆದೆಸೆಯೊಳೇನೊ ಹೊಸಬೆಳಕು ಹಬ್ಬಿರುವನ್ನ
ನಸುನಾಚಿಯುಕ್ಕರೆಯ ನಗೆಯೂಡುತಿಹುದು

ಕುಸುರುಗಂಗಳ ಕೊನೆಯ ಕಾಮಿತದ ನೋಟದಲಿ
ಸೊಗಸು ಜೇನಿನ ಸರಿಯ ಸೆಲೆಯುಣ್ಮುತಿಹುದು
ನಗೆನಗೆಯೊಳಟ್ಟಣಿಸಿದೆಸಳ ತುಟಿ ತತ್ತರಿಸಿ
ಗೆಲವು ಬಿಂಕದ ಮೌನ ಬಾಸಣಿಸುತಿಹುದು

ದೂರ ದೂರದೊಳೊಂದು ಪ್ರೀತಿಗುಂಜಾರವದ
ಗೀತಿಯನುಮತವಾಗಿ ನೇವರಿಸುತಿಹುದು
ಏನೊ ಸವಿಗನಸಾಗಿ ಎಂದು ಕಾಣದ ಹರಣ
ಮೆಲುಮೆಲಿತು ಮಮತೆಯಲಿ ಮುದ್ದಾಗುತಿಹುದು

ಆರಿಗೂ ಬಗೆಬಿಚ್ಚಿ ಮಾತನಾಡದ ಬದುಕು
ಬಯಕೆ ಬಾಗಿಲ ತೆರೆದು ಕಾದಿರುವ ನೋಟ!
ಮಾತಿಗೊದಗದ ಮನಸಿನನುಭವದ ಶಾಲೆಯಲಿ
ಪ್ರೀತಿಯೊಂದೇ ಕೂಡಿ ಕಲಿತಿರುವ ಪಾಠ!

ತನ್ನದೆಂಬುದುಸಲ್ಲ—ಭೇದವೇನಿನಿತಿಲ್ಲ—
ತಾನೆ ತನ್ನವನಾಗಿ ಬೆರೆತಿರುವ ರೀತಿ!
ತನ್ನದೆಂಬೀ ರೂಪರಸದ ಸಾಯುಜ್ಯದಲಿ
ಹಾಲುನೀರಂತಾಗಿ ನೆರೆದಿರುವ ನೀತಿ!

ಮನಸು ಮನಸು ಕೂಡಿ
ಕಣ್ಣು ಮಾತನಾಡಿ
ತುಟಿಯು ಮುದ್ದಿನೊಂದು
ನೈಮೆಯರಿತಿದೆ!

ಎದೆಯ ಬೀಣೆಯತ್ತ
ಜೊತೆಯ ತಂತಿ ಮಿಡುಕಿ
ರತಿಯರಾಗದೊಂದು
ಗೀತೆ ಹರಿದಿದೆ!

ಬದುಕಿನೆರಡು ಹಾದಿ
ಹೊಸೆದು ಹೊಸೆದು ಕೂಡಿ
ಎರಡನೊಂದು ಮಾಡಿ
ಮುಂದೆ ಸಾಗಿದೆ!

ಹರಯದೆರಡು ಜೀವ
ಮಮತೆ ದೀಪವಿಡಿದು
ನಗುತ ನಗುತ ಹಾಡಿ
ಮುಂದೆ ಸಾಗಲಿದೆ!

೨೪—೬—೧೯೪೩

---

## ಚೆಲುವು

ತಿಂಗಳು ಮೂಡಿತ್ತಾಗಸದಲಿ ಶುಭ
ಮಂಗಳವಾಯಿತು ಭೂಮಿ
ತಿಂಗಳ ಬೆಳಕಿನ ಹಾಲಿನ ಸಿರಿಮುಡಿ
ಸಿಂಗರವಾಯಿತು ಭೂಮಿ

ತುಂಬಿದ ಮನಸಿನ ಕವನದ ತೇಗು
ತುಂಬಿರಲಿಕೆ ಬೇಕೆಲ್ಲ
ಹೊಸ ಹೊಸ ರಾಗದ ಹೊಸಹೊಸ ಭೋಗದ
ಹೊಸ ಹುರುಪಿನ ಸವಿ ಸೊಲ್ಲು

ಸಂಜೆಯ ನನೆಮನೆಯಾಟದ ಹಕ್ಕಿ
ಮೆಚ್ಚುಗೆಯಾಡಲೆ ಬೇಕು
ಇರುಳಿನ ಹೂಗುಡಿ ನೋಟದ ಚುಕ್ಕಿ
ತಾನೇ ತಳುಹಲು ಬೇಕು

ನೋಟಕು ನೋಟಕು ಸೊಬಗಿನ ಸೃಷ್ಟಿ
ಬಾಳನು ಸೆಳೆದಿರಬೇಕು
ಮಾಟಕು ಮಾಟಕು ಮಮತೆಯ ತೋಟ
ಬಾಗಿಲ ತೆರೆದಿರಬೇಕು

ನಗೆಮೊಗದಲಿ ತಿಳಿ ಬೆಳಕನು ಕಂಡು
ನೈದಿಲೆಯರಳಿರಬೇಕು

ಚೆಲುದುಟಿಯೊತ್ತಿನ ಸವಿ ಜೇನುಂಡು
ತುಂಬಿಯು ತಣಿದಿರಬೇಕು

ಮಿದುಮಿದುಗದಪಿನ ಕನ್ನಡಿಯಲಿ ಮೂ
ಜಗವನೆ ಕಂಡಿರಬೇಕು
ನಳಿದೋಳಿನ ನಲವಿನ ನಿಚ್ಚಟದಲಿ
ನೆಮ್ಮದಿಗೊಂಡಿರಬೇಕು

ಬಯಕೆಯು ಸವಿಭಂಡಾರದ ಸೆಲೆಯಲಿ
ಭಾವನೆ ತುಳುಕಿರಬೇಕು
ಬದುಕಿನ ಸುಖ ಸನ್ಮಾನದ ಕಲೆಯಲಿ
ಜೀವನ ಹರಿದಿರಬೇಕು

ಮಾತಿಗೆ ನಿಲುಕದ ಮೌನದ ಕರೆಯಲಿ
ಕಲ್ಪವೆ ಕುಣಿದಿರಬೇಕು
ಪ್ರೀತಿಯ ಸೊಗಸೊಗದಾಟದ ಸೆರೆಯಲಿ
ವಿಶ್ವವೆ ಬಿಗಿದಿರಬೇಕು

ಪ್ರೇಮಯು ಸೊಗಸಿನ ಸಮರಸವಾಗಿ
ಸತ್ಯಕೆ ಸಂದಿರಬೇಕು
ಜೀವವು ಸಂಗದ ಮುಂಗೈವಿಡಿದು
ಮುಂದಕೆ ನಡೆದಿರಬೇಕು

ಹರಯದ ಹುಚ್ಚಿನ ಬಯಕೆಯ ತುಂಬಿ
ಜನ್ಮವು ಕಾದಿರಬೇಕು
ಕನಸಿನ ಮನಸಿನ ಕಲ್ಪನೆಯೆಲ್ಲಾ
ಕುಡಿದೂ ಕುಣಿದಿರಬೇಕು

ಹರಯದ ಜೀವ—ಹುಮ್ಮಿನ ಭಾವ
ತಿಂಗಳ ಬೆಳಕಿನ ಹೊತ್ತು !

ಬಳಿಯಲಿ ಚೆಲುವು-ಬದುಕಿನ ಗೆಲವು
ಇದು ತೀರದ ಸಂಪತ್ತು !

೩೦-೯—೧೯೪೩

---

## ಚಿಂತಿತ

೧

ಅನುಭವದೀ ಕನ್ನಡಿಯಲಿ
ಸವಿನೆನಪಿನ ನುಲಿನೆರೆದು—
ನಿಟ್ಟುಲಿಯಲಿ ಮುಸಕಾಗಿಸಿ
ನುಣುಪಿನ ಮೈಮಾಸಿಹುದು

ನೆನೆನೆನಪಿನ ಕಣ್ಣೆವೆಯಲಿ
ಹನಿಗೂಡಿದ ಹಳ್ಳ
ಮಿದುಗೆನ್ನಯ ನೀರುಗೆಯಲಿ
ನಸುತೋಯ್ದಿಹ ಗಲ್ಲ !

ಚೆಲುದುಟಿಗಳ ನರುಗೆಂಪಿಲಿ
ತುಸು ಬೆಳ್ಳನೆ ಬಿಳುಪು
ಸಿರಿಹಂತದ ಪೆರೆನೊಸಲಲಿ
ಕರೆಗೂಡಿದ ನೋಂಪು !

ಸೆಳೆ ನೋಟದ ನೀಳ್ಕರೆಯಲಿ
ತನುಮಾಂದ್ಯದ ಬಿಗಿತ
ನಗೆ ನೇವುರದಳ್ಕರೆಯಲಿ
ಕುದುರಿದ ಮಧುಗೀತ !

೨

ಬಿಸೆ ಬಿಸನದ ಬಿಗುನುಡಿಯಲಿ
ಸಲೆಯುಬ್ಬಿದ ಕೊರಳು
ಎದೆ ಸೇದೆಯ ದಡದಡಿಕೆಯ
ಕಳಕಳತೆಯ ಕರುಳು !

ಇಳಿಯೊಪ್ಪಿನ ನಳಿದೋಳಿನ
ಎಳವಳ್ಳಿಯ ಚೆಲುವು
ಕೆಳಸಾರಿದ ಮೇಲ್ಸೆರಗಿನ
ಮರೆಮರೆತದ ನಿಲುವು !

ನಡನಡುಗುವ ಕಾಲ್ಬುದಿಯಲಿ
ತಿರೆತಿದ್ದುವ ಬರಹ
ತನುಮನಸಿನೊಳನುರಾಗದ
ಕಣೆಯೂರಿದ ವಿರಹ !

ದೆಸೆದೆಸೆಯಲಿ ಕಣ್ಕಲೆಯಿಸಿ
ಸೆಳೆಯುವ ನಿಟ್ಟುಸಿರು
ಎದೆಗುದಿಯಲಿ ಬಗೆಬೇಯಿಸಿ
ತುಳುಕುವ ಮುಂಗಾರು !

ಬಯಕೆಯ ತೂಗುಯ್ಯಲೆಯಲಿ
ಕನವರಿಸುವಳಾಕೆ
ಬಿರುಗಾಳಿಯ ಬರಸೆಳೆತಕೆ
ಹರಿಹಾಯ್ದಿಹ ನೌಕೆ !

ತನತನಗೇ ಗುಣುಗುಣುವಿಸಿ
ಸೈಗರೆವ ನಿರೂಪೆ

ರಸಯೋಗದ ಸಾಕಲ್ಯದ
ಚಿಂತಿತ ರತಿರೂಪ !

× × × ×

ಅನುಭವದೀ ಹೃತ್ಪಟದಲಿ
ಕಳೆದೆಣಿಕೆಯ ಕೈನೆರೆದು—
ದಿನಮಾನದ ಚೂಲಿಕೆಯಲಿ
ಚಿರವಿರಹವ ಬರೆದಿಹುದು !

೭—೧೦—೧೯೪೩

## ಬಿಸಿಲು—ಮಳೆ

೧

ಬಿಸಿಲುಮಳೆ—ಇದರಸೋಗು
ಹೊಸತು ಸೂಳೆಯಂತಿದೆ
ಮುನಿಸು ನಗೆ-ಬೆರೆತ ಬಿಂಕ
ಸೊಗಸು ಚೆಲ್ಲಿದಂತಿದೆ

ಬಿಗಿದು ಕೈ-ಮಾಗಿಸುಗ್ಗಿ
ಕುಣಿದು ಕೂಡಿದಂತಿದೆ
ಎದೆಯ ಹೂ-ಮನಸಿನಾಳ
ಅರಳಿ ತೋರಿದಂತಿದೆ

ಕಣ್ಣಹನಿ — ಹರುಷಕಾಗಿ
ಒಸರು ಸೂಸಿದಂತಿದೆ
ನಲುಮೆಯುಗೆ—ಎದೆಯತೀರ
ತುಂಬಿ ತುಳುಕಿದಂತಿದೆ

೨

ಎರಡುದಿನ— ನಲಿದು ಕೂಡಿ
ನಡೆವ ನೋಂಪು ನೆರೆದಿದೆ
ಎರಡು ತುಟಿ — ಕೂಡಿಹಾಡಿ
ಹೊಸೆವ ಹಾದಿ ತೆರೆದಿದೆ

ಬೊಗಸೆಗಣ್-ಕರೆವನೋಟ
ಮಮತೆಗಾಗಿ ಮಿಂಚಿದೆ
ತೆರೆದ ತೋಳ್-ಬಿಗಿವಬೇಟ
ಮೌನವಾಗಿ ಹೊಂಚಿದೆ

ಬಾಳಕುಡಿ-ಕೊನೆಯ ಮೊಗ್ಗು
ತುಂಬಿಗಾಗಿ ಕಾದಿದೆ
ಎದೆಯ ನುಡಿ–ತಾನೆತಾನೆ
ಮಧುರವಾಗಿ ತೊದಲಿದೆ

೩

ಬಿಸಿಲುಮಳೆ–ಇದರ ಸೋಗು
ಹೊಸತು ಸೂಳೆಯಂತಿದೆ
ಸೊಗಸಿನಿಳೆ–ಇದರ ಸೊಕ್ಕು
ಸವಿದು ಮಲಗಿದಂತಿದೆ

ದಿವದ ಕೊನೆ-ಇದರ ಮೇರೆ
ಕಡಲಿನಾಳವಳೆದಿದೆ
ಇದರ ನಗೆ— ತುಂಬಿ ತುಂಬಿ
ಬಾನನೆಲ್ಲ ಬೆಳಗಿದೆ

ಬಾನಬಳಿ—ಹಕ್ಕಿಯಾಗಿ
ಸೊಗಸುಗಾಂಬೆನೇನು !
ಭುವಿಯ ಸವಿ—ಸೋನೆಗೊದಗಿ
ಸೊಗವನುಂಬೆನೇನು !

೨೨—೭— ೧೯೪೪

## ಹಾರಿಹೋದ ಹಕ್ಕಿ

೧

ಸಂಜೆವೆಣ್ಣು ಕನ್ನಡಿಯಲಿ
ಮೊಗವನೋಡಲೆಳಸಿದಾಗ
ಕವಿದ ಕಾರಿನಿರುಳಿನಲ್ಲಿ
ಮೊಗವೆ ಕಾಣಲಿಲ್ಲ !

ಅಂಜಿದಂಜಿದರಿಲ ಬಳಗ
ತುಣುಕು ಮಿಣುಕು ದೀಪವಿಡಿದು
ಕಿರೆಯ ನೋಡಲೆಳಸಿದಾಗ
ತಿರೆಯೆ ತೋರಲಿಲ್ಲ !

ಇರುಳದೇವಿ ಮುಗುಳೆ ನುಗುಳೆ
ಕವಲು ಮಿಂಚು ಬಳಪವಿಡಿದು
ಬಾನ ಹಲಗೆಯತ್ತ ಬರೆದ
ಬರಹವರಿಯಲಿಲ್ಲ !

ಸೋರು ಮಳೆಯ ಸೆರಗುಗೊಂಡು
ಸೊಕ್ಕಿಸುಳಿದ ಬೀಸುಗಾಳಿ
ಜಗವನೆಲ್ಲ ತೂರಿ ತೂರಿ
ಚಣವುದಣಿಯಲಿಲ್ಲ !

೨

ತೆರೆಯು ಹೊಯ್ದ ಹಡಗಿನಂತೆ
ತೂರಿತಿರಿದ ತರಗಿನಂತೆ
ದಿಕ್ಕುಗಾಣದೊಂದು ಹಕ್ಕಿ
ಕಿಟಕಿಯತ್ತ ಬಂತು !

ಮನೆಯನುಳಿದ ಜೀವಿಯೊಂದು
ಮನದಾಣ್ಮನ ನೆರವಿಗಾಗಿ
ಇನಿದುಗೊರಳ ಕರೆಯನೈಸಿ
ಬೆದರಿ ಚೀರಿದಂತು !

ನಿದ್ದೆವೆಣ್ಣ ಸಜ್ಜೆವಿಡಿದು
ಮರೆತು ಮಲಗಿದಂತರಾತ್ಮ
ಜಡದ ತಂದ್ರ ತಾರವಲುಕಿ
ಬಗೆಯ ಕೇಳಿದತ್ತು

'ತಿರೆಯತುಮುಲು ತತ್ತರದಲಿ
ಕರುಣೆಯೊಸರು ಜಿನುಗುವಂತೆ
ಆರುಬಾಗಿಲೆಡೆಗೆ ಬಂದು
ಸದ್ದುಗುಡುವರಿಂತು?'

೩

ಹೇಳಲಿಲ್ಲ ಕೇಳಲಿಲ್ಲ
ಎದ್ದು ನೋಡಲೆಳಸಲಿಲ್ಲ
ಆರೊ–ಏನೊ–ಎಂದು ಬಗೆದು
ಮನಸು ಮೌನವಾಯ್ತು !

ಬದುಕು ಕನಸಿನುಯ್ಯಲೆಯಲಿ
ಬಳಲಿದೆದೆಯ ಬೆನ್ನುತಟ್ಟಿ

ಸಾವುನೋವುಗಳನು ಮರೆತು
ಮರಳಿ ನಿದ್ದೆವೋಯ್ತು !
ಬೆಳಗುಹೊತ್ತು ಕಣ್ಣ ತೆರೆದು
ಕಿಟಕಿಯತ್ತ ನೋಡುವನ್ನ
ಕಿರಿದುಗರಿಯನೊಂದನುಳಿಸಿ
ಹಕ್ಕಿಕಾಣದಿತ್ತು
ಕೆಂಪು ನೀಲ ಹಲವುಬಣ್ಣ
ಬೆರೆತ ಕಾಮಬಿಲ್ಲಿನಂತೆ !
ಹಕ್ಕಿಯೆನಿತು ಸೊಬಗಿನಿರವೊ
ಯಾರಿಗೇನುಗೊತ್ತು !

೨೫—೭—೧೯೪೪

---

## ಜಾಗೃತ

೧

ಮೂಡದೆಸೆ ಕಟ್ಟೊಡೆದು ಹೊಂಬಿಸಲ ಹೊಳೆಹರಿದು
ನಾಡೆಲ್ಲ ಹೊಸಬೆಳಕು ಹೊಲತುಂಬಿದಂತೆ
ಗೂಡೆಂಬ ಕಗ್ಗವಿಯ ನಟ್ಟಿರುಳ ತವಸಿನಲಿ
ನಾಡೆದ್ದು ಹಾಡಾಗಿ ನುಡಿಕೂಡಿದಂತೆ !
ಬಾನ ಮುಸುಕಿನ ಮೇಲೆ ಹೊಸ ಹೊನ್ನ ರೇಖೆಯಲಿ
ನವ ಚಿತ್ರ ಚಿತ್ತಾರ ಕೆತ್ತಿರಿಸಿದಂತೆ—
ದಿನ ಮೊದಲ ತಂಗಾಳಿ ತೆಳ್ಳಲಿಯ ತೊದಲಿಕೆಯ
ಕಿರುಗೊಳಲ ಕಾಕಲಿಯ ಕರೆಯೂದಿದಂತೆ !
ಮೂತುಮೌನವ ಮರೆಸಿ ಮನಸು ತೆರೆಯೋಸರಿಸಿ
ಗೈಮೆ ಗೂಡಾರದಲಿ ಗುಂಜಾಡಿದಂತೆ
ಪ್ರೀತಿ ನೀತಿಯಾ ನೆರವು ಎದೆಯಮಂದಾರದಲಿ
ಮಧುಕಲಿಕೆ ಮುದ್ದಾಗಿ ಮೊಗವೆತ್ತಿದಂತೆ !

ದಿನ ಮಾನದಳತೆಯಲಿ ಜೀವನದ ಗೇಣುದ್ದ
ಸಾಧನೆಗೆ ಸೇವೆಯಲಿ ಮೈನವಿರಿದಂತೆ
ಜನ್ಮ ಜನ್ಮದ ಪುಣ್ಯ ಪೀಯೂಷ ಸೌಂದರ್ಯ
ಸಿದ್ಧಿಯಲಿ ಹೊಯ್ದಾಡಿ ಚೇತರಿಸಿದಂತೆ !

ಚೇತನದ ತುಂಬುಗೊಡ ಭಾವನೆಗೆ ನೀರೆರೆದು
ತ್ಯಾಗ ಭೋಗದ ತೆನೆಯ ತಿರಿತುರುಗಿದಂತೆ—
ಜನಮನದ ಸೌರಭದ ಸಿರಿಯು ದೆಸೆ ದೆಸೆಯಡರಿ
ದಿವದ ಹೆಬ್ಬಾಗಿಲಿನ ಬಳಿ ತೇಗಿದಂತೆ !

೨

ಕ್ಷಣಕಾಲ ಬಗೆ ತಳುಹಿ ನಿಚ್ಚಟದ ನೋಟದಲಿ
ಈ ಕಡೆಯ ಬಾನಕಡೆ ನೋಡು ತುಸು ಮಾತ್ರ
ಅಣುರೇಣುಗಳ ಮೇಲೆ ಹೊಸ ಹರಣದುಸಿರಾಡಿ
ವಿಶ್ವರೂಪದ ಮೂರ್ತಿ ಮೆರೆವ ಕುರುಕ್ಷೇತ್ರ !

ದಿನವು ಜನ್ಮದ ಗೆಲವು—ಸಾವು ಸೋತಾ ರೀತಿ
ಇರುಳು ಜಗುಳಿದ ಮೇಲೆ ಬೆಳಕೆ ಬೇಕಲ್ಲ!
ಜೀವನದ ಕನ್ನಡಿಗೆ ದಿನವು ರಸವಿಕ್ಕಿದರೆ
ಅನುಭವದ ಮೊಗದಪರಿ ನೋಡಬೇಕಲ್ಲ!

ಬಾಳುವೆಯ ಹೊಳಲಿನಲಿ ಕತ್ತಲಾಗುವ ವೇಳೆ
ಗೈಮೆಗೊದಗುವ ಬಿಂಬ ನೆರೆದಿರಲುಬೇಕು
ಭಾವನೆಯ ಕವಿತೆಯಲಿ ಕುಂಟು ಪಂತಿಯ ಚಿತ್ತು
ಕತ್ತಲಿನ ಕೈವಾಡ ಕಳೆದಿರಲುಬೇಕು !

ನೆನಪಿನರಮನೆಯತ್ತ ಕನವರಿಸುತಿರಬೇಡ
ಯುಗದ ಯಾತ್ರೆಗೆ ದಿನದ ಬುತ್ತಿ ಬಿಗಿದುಂಟು
ಮುಸುಕು ಮುಸುಕಿನ ಹಾದಿ ಪಯಣಗೊಂಡಿರಬೇಡ
ಏನು ಕಂಡೆಯೊ ಅದುವೆ ಕೈಗಿರುವ ಗಂಟು !

ಬೆಳಕು ಜೀವದ ಸೊತ್ತು— ಜೀವನದ ಮೇರೆಯಲಿ
ಸಾವು ಸುಳಿದರೆ ಕಳ್ಳಹೆಜ್ಜೆಯದು ಬೇರೆ
ಬೆಳಕಿನೀ ರಾಜ್ಯದಲಿ ಕ್ಷಣನೊಂದು ಹನಿಯಾಗಿ
ಸಿಡಿದು ಮೆರೆದರೆ ಸಾಕು—ಸಾಕಲ್ಲ ನೀರೆ?

೩೧—೧೦—೧೯೪೪

## ಒಸಗೆ



ಕದದೆರೆದು ಕಾದಿರುವೆನು
ಎನ್ನಂತರಂಗದ ಮನೆಗೆ ಬಾ !

೧

ಮುಂಜಾವ ಬೆಳಕಾಗಿ ಬೆಳಗಿನಿಂಚರವಾಗಿ
ಇಂಚರದ ಸೆಲೆಯಾಗಿ ಬಾ !
ಸಂಜೆಯ್ಸೆ ಸಿರಿಯಾಗಿ ಸಿರಿಯ ಸಿಂಗರವಾಗಿ
ಸಿಂಗರದ ಸೊದೆಯಾಗಿ ಬಾ !

೨

ಸುಗ್ಗಿಯಲಿ ಕೋಗಿಲೆಯ ಕೂಜಿತದ ಕಾಕಲಿಯ
ಕಲೆಯ ಕಾದಲ್ಮೆಯಲಿ ಬಾ !
ಕಾದಲ್ಮೆಗರಿಗೆದರಿ ಜೀವಿತದ ತಂತಿಯಲಿ
ಜೋಡರಿತ ಹಾಡಾಗಿ ಬಾ !

೩

ಬೇಸಗೆಯ ಹೊತ್ತಿನಲಿ ಒಲೆಯ ಕಾವಲಿಯಂತೆ
ಕೆಚ್ಚೆದೆಯ ಕಾದುರಿಸಿ ಬಾ !

ಕಾದ ವಿರಹದ ಸೇದೆ ಯೆಡ್ದೆಸೆಗೆ ತಿದಿಯೂದೆ
ಮೂಸೆಯಲಿ ಮಿಸುಪಾಗಿ ಬಾ!

೪

ಮುಂಗಾರು ಮುಂಚಿತಕೆ ಚಾತಕದ ನೀಳ್ಕರೆಗೆ
ಸೊಗದ ಸೆಳೆಮಿಂಚಾಗಿ ಬಾ!
ನಿಸ್ಸಂಗ ಶೂನ್ಯತೆಯ ಬಾಂದಳದೆ ಗುಡುಗುಡಿಸಿ
ನೀರವದ ಕಟ್ಟೊಡೆದು ಬಾ!

೫

ಶ್ರಾವಣದ ಮೊದಲ ದಿನ ಮೂಜಗದ ಮುಗ್ಧತೆಗೆ
ಮಧುರ ಮಂಗಳವಾಗಿ ಬಾ!
ಮಧುರ ಚೇತೋವನಿಯ ಸಸ್ಯ ಶಾದ್ವಲದತ್ತ
ಪದುಳ ಪಾತರವಾಗಿ ಬಾ!

೬

ಮಾಗಿಯಲಿ ಮುಗಿದಲರ ಮಿದುದುಟಿಯ ಬಾಸಣಿಸಿ
ತೊಳಲು ತಂಬೆಲರಾಗಿ ಬಾ!
ಮಂಜುಗೂಡಿದ ಹನಿಯ ಸಿರಿಮುಡಿಯ ತೆನೆತೆನೆಯ
ಸುಖದ ಸೇಚನೆಯಾಗಿ ಬಾ!

೭

ಸೋಲಿನಲಿಗೆಲವಾಗಿ ಗೆಲವಿನಲಿ ತಲೆವಾಗಿ
ಮಮತೆಯಲಿ ಮಿಂದೆದ್ದು ಬಾ!
ಮಿಂದು ಮೈಕೈ ಕೊಸರಿ ಜವ್ವನದ ಹೆಜ್ಜೆಯಲಿ
ಮೆಚ್ಚುಗೆಯ ಮುಪ್ದಾಗಿ ಬಾ!

ಕದದೆರೆದು ಕಾದಿರುವೆನು—
ಎನ್ನಂತರಂಗದ ಮನೆಗೆ ಬಾ!

೨೧—೧೧—೧೯೪೪

---

## ಕವಿ–ಕಲ್ಪನೆ

ಕುಕಿಲ್ ತೊದಲುವ ನಸುಕಿಲಿ ನಾನು
ಹರಿಯುವೆನು ಹಾಲಾಗಿ
ಮುಗಿಲ್ ತೇಲುವ ಬಾನಿಲಿ ನೀನು
ಕಾಣುತಿಹೆ ಕೆನೆಯಾಗಿ

ಬಿಸಿಲ್ ತುರುಗಿದ ಬೆಳಗಿಲಿ ನಾನು
ಕೀಡುವೆನು ಹುಮ್ಮಾಗಿ
ಎಸಳ್ ಬಾಗಿಲ ಬಳಿಯಲಿ ನೀನು
ಕೂಡುತಿಹೆ ಕಮ್ಮಾಗಿ

ಕನರ್ ಕಾಯಿಯ ಕೊನೆಯಲಿ ನಾನು
ತೂಗುವೆನು ಹಣ್ಣಾಗಿ
ಕೊನರ್ ಕೂಡಿದ ಲತೆಯಲಿ ನೀನು
ಬಾಗುತಿಹೆ ಹೂವಾಗಿ

ಹೊನಲ್ ಸೂಸಿದ ತಣ್ಪಿಲಿ ನಾನು
ತುಳುಕುವೆನು ತೆರೆಯಾಗಿ
ಹಸುರ್ ಹಾಸಿದ ಬಯಲಲಿ ನೀನು
ಬಳುಕುತಿಹೆ ತೆನೆಯಾಗಿ

ತೊದಲ್ ಮಾತಿನ ರುತಿಯಲಿ ನಾನು
ನುಡಿಯುವೆನು ಕೊರಳಾಗಿ

ಮೊದಲ್ ನೋಟದ ರತಿಯಲಿ ನೀನು
ಮಿಡಿಯುತಿಹೆ ಬೆರಳಾಗಿ

ಬೆಳಿರ್ ತೋಟಿಯ ಬಿಸುಪಿಲಿ ನಾನು
ಕಾಯುವೆನು ಕಾವಾಗಿ
ತಳಿರ್ ಸಾಟಿಯ ತುಟಿಯಲಿ ನೀನು
ವಿಾಯುತಿಹೆ ಮುದ್ದಾಗಿ

ಒಸರ್ ನೇಹದ ಮಡಿಲಲಿ ನಾನು
ಹೊಮ್ಮುವೆನು ಬೆಮರಾಗಿ
ಕುಸುರ್ ಲಜ್ಜೆಯ ಸೆರಗಿಲಿ ನೀನು
ನೆಮ್ಮುತಿಹೆ ನವಿರಾಗಿ

ಕಡಲ್ ತೂರಿದ ತೆರೆಯಲಿ ನಾನು
ಸಾಗುವೆನು ಹಾಯಾಗಿ
ಸಿಡಿಲ್ ಮುಸುಗಿದ ಕಾರಿಲಿ ನೀನು
ಹೊಂಚುತಿಹೆ ಮಿಂಚಾಗಿ

ಇರುಳ್ ಕಂಗಳ ಮರೆಯಲಿ ನಾನು
ನೋಡುವೆನು ಮಿಣುಕಾಗಿ
ಅರಳ್ ತಿಂಗಳ ಸಿರಿಯಲಿ ನೀನು
ಕೂಡುತಿಹೆ ಕನಸಾಗಿ

ಬಿಸಿಲ್ ಬದುಕಿನ ಬೆಳಗಿಲಿ ನಾನು
ಹಾಡುವೆನು ಕವಿಯಾಗಿ
ಸುಸಿಲ್ ಬಯಕೆಯ ಬೈಗಿಲಿ ನೀನು
ಕೂಡುತಿಹೆ ಹೆಣ್ಣಾಗಿ

೨೬—೮—೧೯೪೫

---

## ಕವಿತಾ ಕಾಮಿನಿ

೧

ಕವಿತಾ ಕಾಮಿನಿ ಕನಸಿಲಿ ಬಂದು
ಕರೆವಳು ಕುಣಿಯಲಿಕೆ
ಇರುಳೊತ್ತಿದ ಕಣ್ಣೆವೆಗಳನೆತ್ತಿ
ಕರೆವಳು ಕುಣಿಯಲಿಕೆ

ಸತ್ತಿದೆ ಸಾವು ಕಳೆದಿದೆ ನೋವು
ಹಸನಾಗಿದೆ ಹೂಹರಣ
ನಸುಕಿನ ಬೇಟದ ಒಳವೊಳ ನೋಟದ
ಹೊಸಬಯಕೆಯ ಸುಖಶರಣ

ಆ ಕಡೆ ಬಂಡು ಕುಡಿದಳಿವಿಂಡು
ಸೈಗರೆದಿದೆ ಸವಿಸೂರೆ
ಈ ಕಡೆ ಹಕ್ಕಿ ಇನಿಗೊರಳುಕ್ಕಿ
ದನಿಗೂಡಿದೆ ಮನಸಾರೆ

ತಳಿರಿನ ತೊಂಗಲ ನಡುಮನೆಯಂಗಳ-
ದೆಡೆಯಲಿ ಕೊನರಿದೆ ಮುಗುಳು
ನನೆನಲ್ಬಾಸಿನ ತನಿಸೊದೆ ಸೂಸಿನ
ಬಾಯ್ಬಿಟ್ಟಿದೆ ಬಿಗಿದಗಳು

ಗಿರಿಯಲಿ ತುಂಬಿ ಬಯಲಲಿ ತುಳುಕಿ
ಮೈಗೂಡಿದೆ ತನಿಯೊರತೆ
ಜೀವನದಾಚೆನ ಸಾಗರದಂಚಿನ
ಕಡೆ ಧಾವಿಸುತಿಹ ಮಮತೆ

ಗೈಮೆಯ ತಿದಿಯಲಿ ಕಾವಲಿಗೊಂಡು
ಕಲ್ಪನೆ ತಿದ್ದಿದ ರೂಪ
ಅತೀತಾವ್ಯಕ್ತದ ಸಿದ್ಧಿಗೆ ಸಂದು
ಮೆಚ್ಚಿದೆ ರಸದ ನಿರೂಪ !

೨

ಹೆಜ್ಜೆಯ ಮೇಲೆ ಹೆಜ್ಜೆಯನಿರಿಸಿ
ಯಾರೋ ಬಂದಿಹರಲ್ಲಿ
ಅನಂತ ಕಲ್ಪದ ಹೆಡತಲೆ ಮೆಟ್ಟ
ಯಾರೋ ನಿಂದಿಹರಲ್ಲಿ !

ದೆಸೆಸಿಂಗಾರ — ಅಹ ಸಂಸಾರ
ಸುಖವೋ ದುಃಖವೊ ಏನೊ !
ಇದು ಪಾತಾಳವೊ ಬದುಕಿನ ಗಾಳವೊ
ಬಯಲೋ ನಿಲುಕದ ಬಾನೊ !

ದಿನದನುರಕ್ತದ ಸಹನೆಯ ಚಿತ್ತದ
ಕರುಳಿನ ಕಹಳೆಯ ನಾದ
ಹರಯದ ಹುಮ್ಮಿನ ಭೋಗದ ಬಿರುದಿನ
ಗೆಲವಿನ ಮಧುರೋನ್ಮಾದ !

ಕಾಡಿನ ಕೊನೆಯಲಿ ಗೂಡಿನ ಮನೆಯಲಿ
ಸೆಲೆಯ್ಮಿಸಿದೆ ಹೊಸರಾಗ
ಬೆಲ್ಲದ ಬೇವಿನ ಹುಟ್ಟಿನ ಸಾವಿನ
ಮಾಪೂರದ ಆವೇಗ !

ಸಿಡಿಲಿಗೆ ಸೋಲದ ಗುಡುಗಿಗೆ ನಡುಗದ
ಸೆಳೆಮಿಂಚಿನ ಮನದಳತೆ

ಚಳಿ ಮಳೆ ಬಿಸಿಲಿಗೆ ಬೆದರದ ಬಾಗದ
ಜೀವನದನುಭವದ ಲತೆ

ಕತ್ತಲ ಮನೆಯಲಿ ಬೆಳಕನು ತೂರಿ
ತಿಂಗಳ ಕಾವಣ ಹರಡಿ
ದೈತ್ಯರ ಮನೆಯಲಿ ದೇವರನಿರಿಸಿ
ಕಲ್ಪವು ಕಾದುವ ಗರಡಿ!

೩

ಕವಿತಾಕಾಮಿನಿ ಕನಸಿಲಿ ಬಂದು
ಕರೆವಳು ಕುಣಿಯಲಿಕೆ
ಚೆಲುಕಾಲಂದುಗೆ ಕಿಣಿಕಿಣಿರೆನೆ ನಗೆ
ಯೊಪ್ಪಿಸಿ ಕುಣಿಯಲಿಕೆ

ಸಂಜೆಯ ಸೆರಗು ಮುಗಿಲಿನವರೆಗು
ಕುಡಿಮಿಂಚಿನ ಚಿತ್ತಾರ
ತೆಳುತಂಗಾಳಿ ಮೆತ್ತನೆ ನುಸುಳಿ
ತೂಪಿಟ್ಟಿದೆ ಜಗಜನರ

ಬೆಳಕಿನ ಬಿಜ್ಜೆಯನರಿಯಲು ತೂಗಿದ
ಕತ್ತಲೆ ಹಿನ್ನೆಲೆಯಂತೆ
ಸತ್ಯದ ಸೊಡರಿನ ಹಿಂಬದಿಸರಿದು
ಕೂಡಿದೆ ಕನಸಿನ ಸಂತೆ

ಚೆಲುವಿಕೆಯೊಂದೆ ವಿಶ್ವದ ಮುಂದೆ
ನೋಡುವ ನೋಟವು ವಿವಿಧ
ಹಾಸಿದ ಹಾಸು ಹೂಡಿದ ಹೊರಸು
ಇದು ಕಲೆಯಿೂವ ಹಸಾದ

ಮೆಲಿತೋ ಮೆಲಿತು ಮಾನಸಕಾಗಿ
ಮಿಡಿಯುವ ಬೀಣೆಯ ಹರುಷ
ಹೊಸತೋ ಹೊಸತು ಹೃದ್ಗತವಾಗಿ
ಸುಂದರ ಸತ್ಯವಿಕಾಸ

ಜುಮ್ಮೆನಿಸಿದೆ ಮೈ ಝುಮ್ಮೆಸಗಿದೆ ಕೈ
ಹೊಮ್ಮಿದೆ ಮನದೆಣಿಕೆ
ಕವಿತಾಕಾಮಿನಿ ದಿನವೂ ಕಾದು
ಕರೆವಳು ಕುಣಿಯಲಿಕೆ!

೨೨– ೭—೧೯೪೭.

## ಜೀವನ

### ೧

ಮೊದಲ ಬಾನತ್ತ ಕಡೆ ಕಣ್ಣೆತ್ತಿ ನೋಡಿದೆನು
ನೋಡಿದೆನು—ಮುಂಬೆಳಕು ಮೂಡಿದ್ದಿತು
ಮರಮರಗಳೆತ್ತರದ ತುತ್ತ ತುದಿಯಲಿ ಕೂಡಿ
ಬೆಳಗಿನಾ ಬೆಳ್ವಕ್ಕಿ ನಲಿದಿದ್ದಿತು

ಮಂಜಿನವರೋಧದಲಿ ಮಧುರ ಮಂದಸ್ಮಿತಂ
ಮೂಡಿತ್ತೊ ಮುಂಜಾವದುದಯರಾಗ
ಕಣ್ಣಹನಿ ಕೆಳಗುರುಳಿ ಸೂಸಿ ಮಾಸಿದ ರೀತಿ
ಕಳೆದಿರುಳ ಚುಕ್ಕಿಗಳ ಚಿರ ವಿಯೋಗ

ಹೂಗಳಲಿ ಮುಮ್ಮಾತು ಮಮತೆಯನು ಮೇಳೈಸಿ
ಗರಿಯದುರಿ ತುಟಿಯೊತ್ತಿ ಅಳಿಯೊದಗಿದೆ
ಅಳಿಯಾಸೆ ಹಿರಿಮೆಯಲಿ ಮನಸಿನಾದರವರಿತು
ತಾನೆ ತನದೆಂದು ತತ್ಪರಗೊಂಡಿದೆ

ತಂಗಾಳಿ ಸುಯ್ಲುಡರಿ ಜೀವನದ ಹಾದಿಯಲಿ
ಕಾಮಿತದ ಕೈವಿಡಿದು ಮುನ್ನಡೆದಿದೆ
ಏನೊ ಮಾಯಕದ ಕೈಬೆರಳು ತಂತಿಯನದುರಿ
ಹೃದಯದಲಿ ತತ್ತರದ ತೆರೆ ಹೊಯ್ದಿದೆ

ಗಿರಿದರಿಯ ಕಿರುವೊಚ್ಚ ಕಾಡಕಮರಿಯನುಳಿದು
ಬಯಲ ಪೊರೆವಾರದಲಿ ಮೈನೆರೆದಿದೆ
ಇಕ್ಕೆಲದ ಹೊಂಬಾಳೆ ಹಣ್ಣು ಹರಕೆಯ ಹೊತ್ತು
ಮೊದಲ ಮನ್ನಣೆಗಾಗಿ ತಲೆ ಬಾಗಿದೆ

ಬೆಳಗಿನೀ ಸಂದೇಶ ದಿನದಿನಕು ವಿಾಸಲಿದೆ—
ಜನತೆ ಜಂತುಗಳೆಂಬ ಭೇದವೆಲ್ಲಿ?
ಸೊಗಸು ಕೂಡಿದ ನೋಟ ಸೊಗಸು ಕಲಿಸಿದ ಪಾಠ
ಇದನು ಜೀವದ ಹಂತವರಿಯುವಲ್ಲಿ !

೨

ಕೊನೆಯ ಬಾನತ್ತ ಕಡೆ ಕಣ್ಣೈಸಿ ನೋಡಿದೆನು
ನೋಡಿದೆನು—ಕತ್ತಲಿನ ಕರಿ ಹೊಮ್ಮಿದೆ
ಪಡುಗಡಲ ತೀರದಲಿ ತೆರೆಗಳೋಕುಳಿಯಾಗಿ
ನಸುಗೆಂಪು ದೆಸೆದೆಸೆಗೆ ಚಿಲು ಚಿಮ್ಮಿದೆ

ಕತ್ತಲಾಟದ ಮನೆಗೆ ಸಂಜೆ ಬಿಜಯಂಗೈದು
ಹಲಹಲವು ದಾಳಗಳ ಚೆಲ್ಲಿರುವಳೊ !
ಕತ್ತುರಿಯ ಹೊಳಲಿನಲಿ ತೆಳುಗಾಳಿ ಸಂಚರಿಸೆ
ದಿವದರಳುಮಲ್ಲಿಗೆಯನೆರಚಿರುವಳೊ !

ಎದೆಯ ಕದವನು ಮುಚ್ಚಿ ಎಸಳು ಬೀಗವ ಬಿಗಿದು
ತಿಳಿಗೊಳದ ಕಮಲಮುಖಿ ಮಲಗಿರುವಳು

ತಿಂಗಳನ ನೇಮದಲಿ ಸಿಂಗರಕೆ ಸಜ್ಜಾಗಿ
ಅರರೆ ! ರಾತ್ರಿಯ ರಾಣಿ ಕಾದಿರುವಳು

ಮಮತೆಯಲಿ ಮುದ್ದಾಡಿ ಮೌನದಲಿ ಮೈದಡವಿ
ಕಣ್ಣವೆಯ ತೊಟ್ಟಿಲಲಿ ಕನಸಡಗಿದೆ
ಇರುಳು ನೆಮ್ಮದ ಮಾರ್ಗವಿತ್ತಡಿಯ ಸೌಂದರ್ಯ
ಪೂರದಲಿ ಚಿರಶಾಂತಿ ನೆಲೆಯಾಗಿದೆ

ನಿಶೆಯ ಹೆಣ್ತನದ ಹೃದಯಪ್ರೀತಿ ಮಥನದಲಿ
ಚಂದಿರನ ಸೊದೆಗಳಸ ಮೇಲುಕ್ಕಿತೊ !
ಆಗುಹೋಗನು ತೊರೆದು ಸಾವುನೋವನು ಮರೆದು
ತಿರೆಯೇನು ಚೆಲುವಿಕೆಯ ಮತ್ತಡರಿತೊ !

ಚೆಲುತನದ ತಿಂಗಳಲಿ ಭೋಗದೀ ಬ್ರಹ್ಮಾಂಡ
ಬಯಕೆಹಾಯನು ಹರಡಿ ಮುನ್ನಡೆದಿದೆ
ಇದು ಗತಾಗತ ಧರ್ಮಗಳನೆಲ್ಲ ಹಿಂದಿಕ್ಕಿ
ಮಿಲದನಾಗತಕಾಗಿ ಮುನ್ನಡೆದಿದೆ!

೩

ಜೀವನವು ಹೊಸತಲ್ಲ—ಅನುರಾಗದಳತೆಯಲಿ
ಅದನು ಕಾಣುವ ನೋಟ ಹಲವು ಹತ್ತು
ಅದರ ಸೊಬಗನು ಕಂಡು ಅದರ ಕಂಬನಿಗೊಂಡು
ಅದನರಿವ ತವಸು ಕವಿಮನದ ಸೊತ್ತು !

ಅಳಿಯಾಗಿ ನಲಿದಾಡಿ ಗಿಳಿಯಾಗಿ ಮಾತಾಡಿ
ಹೂವಾಗಿ ಹೃದಯ ಹಗುರಾಗಬೇಕು
ಮುಗಿಲಾಗಿ ಮೇಲೇರಿ ಗುಡುಗಾಗಿ ಗಜಗಜರಿ
ತಿಳಿತನದ ಸೋರುಮಳೆ ಸುರಿಯಬೇಕು

ಸಿಂಗರಕೆ ಬಾಗದಿರು ಕನಿಕರಕೆ ಸೋಲದಿರು
ಸಿಂಗರದ ಕುಂದಣವು ಕರುಣೆಯೊಂದೆ

ಬೆಳಕು ಬೆಳಕೆಂಬ ಬಿನ್ನಣವು ನಲಿದಾಡುತಿದೆ
ಕತ್ತಲಿನ ಹಿನ್ನೆಲೆಯ ತೆರೆಯ ಮುಂದೆ!

ಸತ್ತ ಸಗ್ಗವನೆನಿತೊ ಹೊಗಳಿ ಬಾಯಾರಿದೆವು
ಇರುವಿಕೆಯನೊಮ್ಮೆನೀನರಸಿ ನೋಡು
ಚಿತೆಯ ಮೊಗವಾಡದಲಿ ಬವಣೆ ಸರಸವನಾಡಿ
ನಲಿದ ನಿತ್ಯದ ಕತೆಯನೊಮ್ಮೆ ಹಾಡು!

ನೋವು ನಿತ್ಯದ ನಂಟು ಸಾವು ಬದುಕಿನ ನೆರಳು
ಸೆರಗಿನಲಿ ಕಟ್ಟಿಹುದು ದಿನದ ಬುತ್ತಿ
ಬೆವರ ನೀರಲಿ ಬೆಂದ ಗೈಮೆಯುಗಳನು ತಿಂದು
ಕ್ಷಣಕಾಲ ವಿಶ್ರಾಂತಿಗೊಳುವ ವೃತ್ತಿ!

ಮೇಲು ಬಾನತ್ತಕಡೆ ಕಣ್ಣೈಸಿ ನೋಡಿದೆನು—
ನೋಡಿದೆನು ಕಟ್ಟಿರುಳು ಕವಿದಿದ್ದಿತು
ಇರುಳಮುಸುಕನು ಮೀರಿ ಕವಿಯ ಜಾಗರಣೆಯಲಿ
ಕಲ್ಪನೆಯ ಕೈವಲ್ಯ ಕಂಡಿದ್ದಿತು!

೧೭—೧೧—೧೯೪೬

---

## ಆಕೆ–ಮನಸಿನಾಕೆ

೧

ಸೊಗದ ಚಿಲುಮೆ ಚಿಮ್ಮಿ ನಸುಕು ಹೊತ್ತು ನೆಮ್ಮಿ
ಸೊಗಸಿನೊಂದು ನೋಟ ಕೂಡಿಬಂದಿದೆ
ಬಾನ ಪಟಲದತ್ತ ಕಿರಣ ಚೂಲಿಕೆಯಲಿ
ಬರೆದಭವದ ಚಿತ್ರರೂಪುಗೊಂಡಿದೆ

ಸೊಗಸು ನೀರು ಹರಿದು ಕತ್ತಲೆಲ್ಲ ಕೊಚ್ಚಿ
ಅಮರ ಗಂಗೆಯಾಗಿ ಬೆಳಕು ಹಬ್ಬಿದೆ

ಸಿಡಿದ ತುಂತುರೆಲ್ಲ ಬದುಕಿನಮೃತವಾಗಿ
ಕ್ಷಣಿಕ ಮೃತ್ಯುಮುಖದ ತಲೆಯ ಮೆಟ್ಟಿದೆ

ಈ ಸೊಗದ ದಿನ ಮನಸಿಗೊಲಿದ ಜನ
ಅಹಾ ಬಾರಳಲ್ಲ— ಬಾರಳೇತಕೊ?
ಮೊದಲ ಬೈಗು ಬರೆದ ಪ್ರಣಯ ಕವನವಾಗಿ
ಪ್ರೀತಿಗೊಲಿದ ರಾಣಿ ಬಾರಳೇತಕೊ?

೨

ಆಕೆ ಮನಸಿನಾಕೆ ಭವದ ಪುಣ್ಯ ನೌಕೆ
ಬಯಕೆ ಹಾಯನೆತ್ತಿ ತೇಲಿ ಬರುವಳೆ?
ನಸುಕು ಮುಸುಕು ಲಜ್ಜೆ ವಿಡಿದತೆರೆಯನೆತ್ತಿ
ಹೆಜ್ಜೆಗೆಜ್ಜೆ ಕುಲುಕಿ ಕುಣಿದು ಬರುವಳೆ?

ಬಾನನೆಮ್ಮದಿಯಲಿ ಕುಹೂ ಕುಹೂ ಕರೆದು
ಕುಕಿಲ ಕೊರಳಿನಿಂದ ಹರಿದು ಬರುವಳೆ?
ಮಲರ ಬಾಗಿಲೆಡೆಗೆ ಮನದ ಮಾತನೈಸಿ
ಸೆರೆವ ತುಂಬಿಯಂತೆ ಹಾರಿ ಬರುವಳೆ?

ಇರುಳುಕಂಡ ಕನಸಿನುಡಿಯ ಕಲ್ಪನೆಯಲಿ
ಎಸಳಕಣ್ಣ ತೆರೆದು ನಕ್ಕು ಬರುವಳೆ?
ಬನದ ತೊರೆಯ ಮೇಲೆ ತೆರೆಯ ತೆಪ್ಪವಾಡಿ
ಮೆಲಿತು ಗಾಳಿಯಾಗಿ ಮೆಚ್ಚಿ ಬರುವಳೆ?

ಬರಿದು ಹೃದಯ ಭಾಂಡವದಕೆ ಜೇನು ಸುರಿದು
ಮೊಗವನೆತ್ತಿ ಕಾದುಕೊಡಲು ಬರುವಳೆ?
ಬಳುಕು ಬಳ್ಳಿದೋಳು ಬಿಗಿದು ನವಿರುಗೊಂಡು
ಭವದ ಪೂಜೆಗಾಗಿ ಮಿಂದು ಬರುವಳೆ?

ಪ್ರೀತ ಮನದ ಪುಷ್ಪಪ್ರಣಯ ದಿವ್ಯಗಂಧೆ
ಮಮತೆಯುರಿವ ದೀಪವಾಂತು ಬರುವಳೆ?
ಮನಸು ಮಾತು ಗೈಮೆ ಬುದ್ಧಿ ಸಕಲ ಸಿದ್ಧಿ
ನಿಮಗೆ ಮೀಸಲೆಂದು ನೋಂತು ಬರುವಳೆ?

ಇಹುದನೆಲ್ಲಕೊಂಡು ಇರದನೆಲ್ಲ ಕಲಿಸಿ
ಕೊಟ್ಟು ಕಾವುದೆಂದು ಬಾಗಿ ಬರುವಳೆ?
ಸುಖದ ಶಾಂತಿಯಾಗಿ ಶಾಂತಿ ಸಿದ್ಧಿಯಾಗಿ
ಸಿದ್ಧ ತೃಪ್ತಿಯಾಗಿ ತೇಗಿ ಬರುವಳೆ?

೩

ದಿನದ ಸೊಗಸು ಬೇರೆ ಇರುಳ ಸೊಗಸು ಬೇರೆ
ಅದನು ಕೋದು ಕೋದು ಸಂಜೆ ಕಳೆದಿದೆ
ದಿನದ ಕೊನೆಯ ಬಾನ ಕಲಶಗನ್ನಡಿಯಲಿ
ದುಃಖಸುಖದ ಪೂರ್ಣರಾಗ ಬೆರೆದಿದೆ

ಕತ್ತಲಾಯಿತೆಂದು ಹಕ್ಕಿ ಸಾರಿದಾಗ
ಕಲ್ಪವೆಲ್ಲ ಬಾಗಿಲಿಕ್ಕಿ ಕುಳಿತಿದೆ!
ಮಮತೆ ಕೂಡಿದೊಂದು ಮುಳ್ಳ ಹಾಸುಗೆಯಲಿ
ಮನಸು ಕದಂದೆರೆದು ಕಾದು ಹೊರಳಿದೆ

ಈ ಕೊನೆಯ ದಿನ ಮನಸಿಗೊಲಿದಜನ
ಅಹಾ—ಬಾರಳಲ್ಲ ಬಾರಳೇತಕೊ?
ಇರುಳು ಸುರಿದ ಕಣ್ಣನೀರ ಕವನವಾಗಿ
ಬದುಕನಾಳ್ವ ರಾಣಿ ಬಾರಳೇತಕೊ?

೯—೧—೧೯೪೭

# ಯುಗಾದಿಯ ಹಾಡು

೧

ಯುಗಯುಗದ ತೆರೆಯಿತ್ತಿ ಬಂದಿದೆ
ಆನಂದದ ಯುಗಾದಿ
ವರುಷ ವರುಷದಾರಂಭಕೊದಗಿದೆ
ಜೀವನದ ಹೊಸಹಾದಿ

ಬಳ್ಳಿ ಚಿಗುರಿದ ಹಕ್ಕಿ ಹಾಡಿವ
ಗಾಳಿಹರಡಿದ ಸುದ್ದಿ
ತುಂಬು ತೊರೆಗಳ ತೂಗು ತೆನೆಗಳ
ದೇಶದೇಶ ಸಮೃದ್ಧಿ

ಬಾನಪಟದಲಿ ಭುವಿಯತಟದಲಿ
ಕಣ್ಣ ತೆರೆದಿದೆ ಕೂಸು
ಸೊಗಸಿನಾಟದ ಪದುಳಪೀಠದ
ಹಸುರು ಹಚ್ಚನೆ ಹಾಸು

ಬೆಳಗು ಹೊತ್ತಿನ ಹನಿಯಮುತ್ತಿನ
ಸೊಬಗು ಸುಗ್ಗಿಯ ಕಳವೆ
ಅಲರ ಸುತ್ತಿನ ಮಧುರಮುತ್ತಿನ
ನೆರವಿಗೊದಗಿದೆ ಪರಮೆ

೨

ದಿನದ ಗೊತ್ತಿಗೆ ಭವದ ಯಾತ್ರೆಗೆ
ಬಂದಿತೀಗಡೆ ಬಾಳು
ಸುಖದ ಸರಿಗಮ ಗೈಮೆ ಗಮಗಮ
ಗೊಳುವ ಸತ್ಯದ ಸೂಳು

ಹೊಸತು ಹರಯದ ಹುರುಪುಹೆಚ್ಚಿದೆ
ಹೊಸತುಬಾಳಿನ ಸಂಗ
ಹೊಸತು ಭಾವದ ಭವನಿಯಂತ್ರದ
ಹೊಸತು ರಾಗ ತರಂಗ

ಮಮತೆ ಮಂಜುಳಗೀತೆಗಲ್ಪಿಸಿ
ಬೀಣೆಮಿಡುಕಿದ ರೀತಿ
ರಸದ ರಾಜ್ಯದ ಕವನಕಲ್ಪಿಸಿ
ಮನಸಿಗೊಪ್ಪಿದ ನೀತಿ

ಜಗವು ಜನ್ಮದ ಪುಣ್ಯವೇದಿಕೆ
ಭೋಗ ಯೋಗದ ಶರಣ
ಬಯಕೆ ಹೆಚ್ಚಿಸಿ ಬದುಕುಮೆಚ್ಚಿಸಿ
ನಗುವ ಹೂವಿನ ಹರಣ

೩

ಹೊಸತು ಹುಚ್ಚನು ತುಂಬಿ ಬಂದಿದೆ
ಆನಂದದ ಯುಗಾದಿ
ಜನರ ಮೆಚ್ಚನು ತಿದ್ದಿ ತೋರಿದೆ
ಹೊಸತು ಬೆಳಕಿನ ಬೀದಿ

ಎದೆಯ ನೆಮ್ಮದಿ ಹಕ್ಕಿ ಹಾರಿದೆ
ಬಾಳಗರಿಯನು ತೂರಿ
ಮನಸು ಮುಗ್ಗದ ಗೈಮೆಸಗ್ಗದ
ಬೆಮರ ಸುಧೆಯನು ಹೀರಿ

ಭುವಿಯುನಮ್ಮದು ದಿವವು ನಮ್ಮದು
ಇದುವೆ ಹೆಮ್ಮೆಯ ಮಾತು

ಎದೆಯ ಹುರುಡಿಗೆ ಗೈವೆಗರಡಿಗೆ
ಜಗವೆ ಮಣಿದಿದೆ ಸೋತು

ಸೊಗಸಿನಾಳ್ಕೆಗೆ ತೆರೆದ ತಳ್ಕೆಗೆ
ಬಾರೆ ಜೀವದ ಗೆಳತಿ
ಇದು ಯುಗಾದಿಯ ಹೊನ್ನಗಾದಿಯ
ಸುಖವನಾಳುವ ಸರತಿ

೫—೯—೧೯೪೭

## ಹೋಳಿ ಹುಣ್ಣಿಮೆ

೧

ಬಾನಂಗಳದಲಿ ತಿಂಗಳು ತೋರಿದೆ
ಹಾಲನು ಚೆಲ್ಲಿದ ಹಾಗೆ!
ಕಾಣದ ಕಲ್ಪದ ಕುಣಿತಕೆ ಕಂಡಿದೆ
ಸಾಸಿರಗಂಗಳ ಸೋಗೆ

ದೆಸೆಯೆಂಬುದು ಹೊಸ ಹೆಣ್ಣಿನ ಹಾಗಿದೆ
ನಸು ನಾಚಿದ ಮಿದುಗೆನ್ನೆ
ದಿವದನುರಾಗದ ಸುಖ ಸಂಸಾರದ
ಭುವಿಯನುರೂಪದ ಕನ್ನೆ

ತೊರೆತೊರೆಗಳ ಕಿರುದೆರೆಗಳ ಕೈವರೆ
ಕುಣಿತಕೆ ಕರೆದಿಹ ರೀತಿ
ಮಳಲುಡೆಗಳ ಪೊರೆವಾರದೆ ಮಿಗುತಿಹ
ಮೌನದೆ ಮಲಗಿದೆ ನಿಯತಿ

ಲೋಕವೆ ನಕ್ಕಿದೆ ಕೋಕಿಯು ಸೊಕ್ಕಿದೆ
ರೂಪವು ರಸದನುಭೋಗ

ಭಾವವು ಬದುಕಿನ ಹಿನ್ನೆಳಲಾಗಿದೆ
ಹೆಚ್ಚಿದೆ ಹೃದಯಪರಾಗ

೨

ರೂಪವೊ ರಸವೊ—ರಸವಿಲ್ಲದ ಬರಿ
ರೂಪಕೆ ಮೆಚ್ಚುಗೆಯೇನು?
ರೂಪಕೆ ಕಣ್ ಕುಣಿದಿದೆ ಜಿನುಜಿನುಗಿದೆ
ಹರಯದ ಹುಮ್ಮಿನ ಜೇನು

ಮುತ್ತಾರದ ಮಧು ಮಧು ಗುಂಜಿತವಿದು
ಇದು ಸಂಗದ ಸುರಲೋಕ
ಸುರಲೋಕದ ಹೂಮಳೆಗರೆದಿದೆ—ಜೇ
ವಡೆದಿದೆ ಪ್ರಣಯಪಿನಾಕ

ಆಹಾ—ತೋಳಿನ ತೂಗುಯ್ಯಾಲೆಯಲಿ
ತಂಗಿದೆ ಜಕ್ಕದ ಜೋಡು
ಮನದಿನಿವೆಂಡಿರ ಮಮತೆಯ ಕಂಡಿರ?
ಆಹಾ ಹೊಮ್ಮಿದೆ ಹಾಡು !

ಮಾಪೂರದ ನೀರಾಟಕೆ ನೆಚ್ಚಿದೆ
ಮಧುರಂಗನ ಮದ್ದಾನೆ
ಆ ಪಾರದ ಬೆತೆ ಬೇಗುದಿ ಕೊಚ್ಚಿದೆ
ಹೆಚ್ಚಿದೆ ಬಾಳಿನ ಸಹನೆ

೩

ಬಾಳುವೆ ಗುಣುಗಿದ ಮೌನದ ಮಾತಿಗೆ
ಮೆಲ್ಲನೆ ಕಿವಿಗುಡಲುಂಟು

ಹೃದಯಕೆ ಮಮತೆಯ ಹೃದಯವನಾನಿಸಿ
ಮೆಲ್ಲನೆ ಮೆಚ್ಚುವ ನಂಟು

ಜನ್ಮದ ಕಿತ್ತಡಿ ಗೈಮೆಯ ಗುಡಿಯಲಿ
ದಿನವೂ ಕಾದಿಹನಂತೆ
ಸೊಗಸಿನ ಪೂಜೆಯ ಸತ್ಯದ ಸೇವೆಯ
ದಿನವೂ ಚೆಲುವಿನ ಚಿಂತೆ

ಮಾತಿಲ್ಲದ ನುಡಿ ಪ್ರೀತಿಗೆ ಮುಂದಡಿ
ಸೊಬಗಿಗೆ ಸೋತಿಹ ಬಾಳು
ಸೋತವರೇ ಗೆಲವಾಳುವ ನೀತಿಯ
ನರ್ಮ ನಿಯೋಗದ ಸೂಳು

ತೋಳ್ ತೋಳ್ ಬಿಗಿದಿದೆ—ತುಟಿ ತುಟಿಗಾಗಿದೆ
ಮೈ ಮೈ ಮೆತ್ತನೆ ಸಜ್ಜೆ
ಹರುಷದ ಸಂಗದ ಸುಖಸಾರಂಗದ
ಕಣ್ ಬಿಗಿದಿದೆ ಕಿರುಲಜ್ಜೆ

೪

ಬಾನಂಗಳದಲಿ ತಿಂಗಳು ತೋರಿದೆ
ತೋರಿದೆ ಸತ್ಯವಿಕಾಸ
ಮೇಲ್ಬಾನಿನ ಸೆಲೆ ಕೆಳಗುಕ್ಕಿರಿದಿಳೆ
ಯಂತರದಲಿ ಮೃದು ಹಾಸ

ನಗುತಿದೆ ಹೂ—ಹೂಗಂಗಳ ಕಾಮನೆ
ಯರಳಿದೆ! ಕರೆವಳು ರಾಣಿ
ರಸಗಂಗೆಯ ನಡು ಹರಯದ ದೋಣಿಯ
ಹೊಸ ಬಯಕೆಯ ಚುಕ್ಕಾಣಿ

ಆ ಹಾ ನೂಪುರವಲುಗಿದೆ! ಗುಣು ಗುಣು
ಗಾನವೆ ಕಲ್ಪದ ಕವಿತೆ
ಆಹಾ ಸೊಗಸಿನ ಸಿರಿಮುಡಿ ಕಂಡಿದೆ
ಬರೆದಿದೆ ವಿಶ್ವದ ಚರಿತೆ

ಮನಸಿಗೆ ಮೋಹವು ಹೃದಯಕೆ ದಾಹವು
ಹರಣಕೆ ಹಿಡಿದಿದೆ ಹುಚ್ಚು
ಜಗವೆಲ್ಲಾ ನಗೆಬೂದಿಯು ಬಳಸಿದೆ
ಇದು ಹೋಳಿಯ ಬಲುಮೆಚ್ಚು

೧೨—೯—೧೯೪೭

---

## ಕವಿ–ಹೃದಯ

ಬೆಳಗು ಬಿಸಿಲಿನ ಹೊತ್ತು ಬಾಗಿಲೆಡೆಗೈತಂದು
ಕರೆವ ಕಿರಣದ ರೀತಿ ಕೈ ಮಿಡುಕಿದೆ
ಒಳಗೊಳಗೆ ಹುದುಗಿದೊಂದನುಭವದ ತಂತಿಯಲಿ
ಹೊಸಹಾಡು ಹಮ್ಮೈಸಿ ದನಿಗೂಡಿದೆ.

ಬಯಕೆ ಬಾನಂಗಳದೆ ಸುರಿ ಸುರಿದ ಸೋರು ಮಳೆ
ಸಾಲದಿದೆ ಸತ್ಯ ಸುಖ ಸೌಂದರ್ಯಕೆ
ಬದುಕಿನಲಿ ಬಗೆ ಹುಳಿತು ಹನಿಯೊಂದು ಕೂಡಿವರೆ
ಅದೆ ವಿಷವು ಜೀವನದ ಕದಡುತನಕೆ!

ಹಲರು ಹಾಡಿದ ಹತ್ತು ಬಗೆಗೆ ಕೂಡಿಹುದಲ್ಲ
ಹಲರ ಕೊರಳನು ಮೀರಿ ಮೆರೆಯ ಬೇಕು
ಚೆಲುವಿನಲಿ ಸೊಗಸಲ್ಲ— ಕೆಡುಕನೊಂದನು ಕಂಡು
ಕೊಲುವ ಬಿಲ್ ಬತ್ತಳಿಕೆ ಬಿಗಿಯಬೇಕು

ಬೆಳಕು ಕತ್ತಲ ಸೆರಗನೊಂದಿ ಸೈತಿಡುವನ್ನ
ಬೆಳಕು ಬೆಳಕಾಗಿ ಬಾಳ್ದುಳಿಯದಯ್ಯ
ಬೆಳಕಿನಲಿ ಕಣ್ದೆರೆದು ಕನಸಿನಲಿ ಕನವರಸಿ
ಕಾಂಬ ಕಲ್ಪನೆಯುದೇ ಕವಿಯ ಹೃದಯ !

೭—೧೧—೧೯೪೭

## ಮಾಯಾಮೃಗ

ಬಾನ ಕಡೆಯುಳ್ಕರಿಸಿ ಮುಂಬೆಳಕು ತೋರಿತ್ತು
ತಂಗಾಳಿ ಮೆಲ್ಮೆಲನೆ ತೀಡಿತ್ತು. ತಳು ತಳುಹಿ
ಆವಳೋ ನಸುನಗುತ ನಡೆದಿರುವಳು
ಬೆಳಗಿನಾ ಗಾಳಿಯಲಿ ಮೇಲ್ಸೆರಗ ಮುಸುಕಿಕ್ಕಿ
ಗುಣುಗುಣಿಪ ಮೆಲುದನಿಯ ಗಾನದಲಿ ಹಮ್ಮೈಸಿ
ಆವಳೋ ತಲೆಬಾಗಿ ಬರುತಿರುವಳು

ಇವಳಾವಳೋ ಕಾಣೆ ಬಿನ್ನಣದ ಬಲುಜಾಣೆ
ಬಿಗಿದತುಟಿಯಕ್ಕರೆಯಿನುಗುವ ಪುಣ್ಯೋದಕದ
ಕಿರುನಗೆಯ ಸೇಸೆಯಲಿ ಬರುತಿರುವಳು
ಇವಳಾವಳೋ ಕಾಣೆ ಮಧುನೃಪನ ಮದ್ದಾನೆ
ಅಳುಕಿ ಬಳುಕುತಲಿಡುವ ಹೆಜ್ಜೆಗಳ ಹೆಮ್ಮೆಯಲಿ
ತೂಗುತೊಯ್ಯೊಯ್ಯನೇ ಬರುತಿರುವಳು

ಇವಳಾವಳೋ ರಮಣಿ ಕಳೆದಿರುಳ ಚೆಲುರಾಣಿ
ರಸದ ಸೇಚನೆಗೊಂಡು ತುಸುಮುಗಿದ ಕಂಗಳಲಿ
ಮಮತೆಯನೆ ಮೇಳೈಸಿ ಬರುತಿರುವಳು
ಇವಳಾವಳೋ ತರುಣಿ ಬಯಕೆತೂರಿದ ದೋಣಿ
ಸುಖದುಃಖಗಳ ತೆರೆಯ ತುಮುಲಿನಲಿ ತತ್ತರಿಸಿ
ಹಾಯೊದಗಿದಂತೆ ಅದೊ ಬರುತಿರುವಳು

ಇವಳಾವಳೋ ಬೆಡಗುಗಾತಿ ಸಂಗದಗೆಳತಿ
ನವವಸಂತಾಗಮದ ಪದಪಿನಲಿ ದಿಗ್ವಿಜಯ
ಕೆಂದು ನಿಂದಿರುವ ಮನ್ಮಥನಿಯೋಗ
ಇವಳಾವಳೋ ನಾರಿ ಯುವಹೃದಯ ಸಂಚಾರಿ
ಕಾಡಿನಲಿ ಕಮರಿಯಲಿ ಬೆಟ್ಟದಲಿ ಬಯಲಿನಲಿ
ಹೊಳಲಿನಲಿ ಸುಳಿಸುಳಿವ ಮಾಯಾಮೃಗ !

ಮಾತು ಮಂತ್ರಣವಲ್ಲ ಪ್ರೀತಿ ಪಾತ್ರವಿದಲ್ಲ
ನೀತಿ ನಡೆಗಳ ಬಟ್ಟೆಯಿವಳಡಿಗೆ ಸಾಲದಿದೆ
ಪ್ರೀತ ಪುರುಷರ ಕಾಮಧೇನುವಿವಳು
ದಾರಿಯಲಿನಿಂದು ಮತ್ತಾರಿಗೂ ನಿಲುಕದಿರು
ವೇರಿಕೆಯ ತುತ್ತತುದಿ ಬೆಲೆಯ ನಿಚ್ಚಣಿಕೆ ಮೇ
ಲೇರಿ ಕೊಯ್ಯುವ ಕಲ್ಪವೃಕ್ಷವಿವಳು

ಇವಳ ಬಗೆ ಬಾನಿನಲಿ ನಗೆಯು ಸುರಲೋಕದಲಿ
ಬಯಕೆ ಕಡಲಾಳದಲಿ ಮಾತು ತೆಂಗಾಳಿಯಲಿ
ಪ್ರೀತಿ ಪಾತಾಳದಲಿ ಹುದುಗಿರುವುದು
ಇವಳ ಮೌನವೆ ಮಾತು ಮಾತೆ ಹೊಂಚುವ ಮಮತೆ
ಮಮತೆ ಕಣ್ಣೀರಿನಲಿ ತೋಯ್ದು ತೋರುವ ರಸವು
ರಸವು ಬೇಸಗೆಯಾಗಿ ಬತ್ತಿರುವುದು

ಇವಳು ಹೊಸ ಬೇಟೆಯಲಿ ತೋಳ ಬಲೆಯನು ಬೀಸಿ
ಕಣ್ಣ ಕೊನೆಯಲಿ ತಿವಿದು ನಿಟ್ಟುಸಿರಸೇದೆಯಲಿ
ಸುಡುವ ಸಖ್ಯದ ಸಾವು ಸುತ್ತಿರುವಳು
ಇವಳು ಸೆರಗಿಲಿ ಹಲವು ಜೀವಿಗಳ ಬಿಗಿಬಿಗಿದು
ಬಯಕೆಯಲಿ ಕಾವನಿಟ್ಟೆದೆಯ ಮೂಸೆಗೆ ಹೊಯ್ದು
ಹೊಡೆದಂತು ಹೊಸಮಿಸುನಿ ಕಂಡಿರುವಳು

ಇವಳು ಸತ್ಯಕೆ ಕೊಟ್ಟ ಶಾಪ—ಸುಳ್ಳಿನ ರೂಪ
ಇವಳು ವಿಶ್ವದ ಸೊಗಸು ಕೊನರು ಕೊಂಡಿಹ ಪಾಪ
ರಸರತಿಯು ನಿಟ್ಟುಸಿರ ವಿರಹತಾಪ
ಇವಳು ಕರ್ಮದ ಕೂಪಕೊಲಿದ ಕಾಮ ನಿರೂಪ
ಇವಳು ಕಾರಿರುಳ ಕಳ್ತಲೆ ಸೆಳೆದ ಸುರಚಾಪ
ಸುಖದ ಕುಣಿತಕೆ ಸಂದ ಮಧು ಮಂಟಪ

ಇವಳಿಗೆದೆಯಿಲ್ಲ ಮೊಗವೊಂದು ನಾಲಗೆಯೆರಡು
ಮುಕ್ಕಣ್ಣು ನಾಲ್ಕು ಕಾಲ್ಕೈಮೂಗು, ಬಾಯಾರು
ಏಳು ಕಿವಿಯೆಂಟು ದೆಸೆಗೈಗಳುಂಟು
ಇವಳ ರೂಪವು ಕಂಡುಕಂಡವರ ಕಂಗಳಿಗೆ
ಹೊಸತಾಗಿ ಸೆರೆಗೊಂಡು ಸೆಳೆಯುತಿದೆ ಮಾಯೆಯಲಿ
ಮುಚ್ಚಿಟ್ಟ ಮುಪ್ಪುರಿಯು ಹೊಸೆದಗಂಟು

ಇವಳು ಕತ್ತಿಯ ಮಸೆಯಲಿಲ್ಲ ಕೊರಳನು ಹಿಸುಕ
ಲಿಲ್ಲ ನುಡಿಗುಂಡುಗಳನೆಸೆದಿಲ್ಲ. ನಿತ್ಯವೂ
ಮೌನದಲಿ ಗೆಲುಗೊಂಡ ಹದನವೇನು!
ಇವಳ ಬಾಯನು ಬಿಗಿದು ಕಣ್ಣಕೊನೆ ಕುಣಿಕುಣಿದು
ಸರಸದೇಕಾಂತದಲಿ ಸುರಿದ ಕಂಬನಿಯದೇ
ಸೊಗಸು ಮುತ್ತಾಗಿ ಮನೆ ತುಂಬಿತೇನು !

ಇವಳ ಮನೆಯಲಿ ತೈಲವಿನಿತಿಲ್ಲ. ಭೋಗಗಳ
ಬರಿದು ಭಾಂಡಾಗಾರ! ದಿನದಿನವು ಕಣ್ಣುಕ್ಕಿ
ಬೆಳಕು ಪಜ್ಜಳವಾಗುತಿರುವುದಂತೆ!
ಆರೊ ಸಂಸಾರಿಗರು ಮೂರು ಸಂಜೆಯ ಹೊತ್ತು
ಈ ಪುಣ್ಯ ಪೀಠಿಕೆಯ ಬಾಗಿಲೆಡೆಗೈತಂದು
ಸುರಿದ ಸಿರಿಹಂತ ನಿಚ್ಚಟದ ಸಂತೆ!

ಇವಳ ಗೆಳೆತನಗೊಂಡು ಬಾಳಿದವರಿನ್ನುಂಟು
ಹಗೆತನದ ಹಾದಿಯಲಿ ನಡೆಯದಿರು. ಹೆಡೆ ಜಡೆಯ
ನುತ್ಕರಿಸಿ ಕಾಳಾಹಿ ಕಾದಿರುವುದು !
ಇವಳ ಮೈಯೊಪ್ಪದಲಿ ಬಂಗಾರ ಬಳಲುತಿದೆ
ಬೆಳ್ಳಿ ಬೆಂಡಾಗುತಿದೆ. ಹೃದಯದಾವರ್ತದಲಿ
ಕಬ್ಬಿಣದ ಕಾವಲಿಯೆ ಕುದಿದಿರುವುದು !

ಇದು ಬೀಣೆಯಲ್ಲ ಕೈಬಿಡದಿರುವ ತಂಬೂರಿ
ಇದುಗಾನವಲ್ಲ ಬಗೆಬಯಕೆಗಳಲೆದೆಯಾರಿ
ಬಾಯ್ಬಿಡುವ ಬದುಕುಗಳ ಕರುಳಕೂಗು
ಇದು ನಾಟ್ಯವಲ್ಲ ಕೊಲೆಕವರುಗಳ ಕುಣಿಕುಣಿತ
ವಿದು ಮೋಹವಲ್ಲ ಹೃದ್ದಾಹಗಳ ದಳ್ಳುರಿಯು
ಕೆಂಪು ಕಾದಲ್ಮೆಗಳ ಕರೆಯ ಸೋಗು

ಇದು ಸೊಗಸಿನೇಕಾಂತ ಗೈಮೆಗೊದಗಿದ ಗುಟ್ಟು
ಹರಯ ಹುಚ್ಚಿನಗೋಪ್ಯ ರತಿಸುಖದ ನೇಪಥ್ಯ
ಕವಡು ಕೈಬಿಗಿದ ಕಣ್ಮುಚ್ಚಲಾಟ !
ಇದು ಕಲೆಯ ತಲೆಮುಸುಕು ಕಾಮನೆಗಳಂತವುರ
ಕೂರ್ಮೆಗಳ ಕಗ್ಗವಿ ವಿಲಾಸಗಳ ಮುಚ್ಚುಮರೆ
ಮಾನಾಪಮಾನಗಳ ಮೊದಲ ಪಾಠ !

ಇದು ನಿತ್ಯದನುಭಾವ ಭವಯಂತ್ರದಾವೇಗ
ಸೋತವರು ಗೆಲ್ದವರು ಕೂಡಿಕೊಂಡಾಟದಲಿ
ಕುಡಿದು ತಣಿಯದಶೇಷ ಸೋಮ ಪಾನ !
ಈ ಸುಖದ ನೇಮದಲಿ ಸ್ವರ್ಗದಾರಾಮದಲಿ
ಕ್ಷಣಿಕವಿಶ್ವವ ಮರೆತು ಕಾಮಿತದ ಕೈಮಿಾರಿ
ತಮ್ಮನೇ ತಾವರಿವ ಮಧುರ ಮೌನ !

ಮುಂದೆ ನಿಂದವನ ಕಡೆ ನೋಡಿ ಕೆಲಬಲದೆ ಕಣ್
ಮಾಡಿ ಪೆರತುಂಬರಿದು ಮಾತಾಡಿ ಮೋಹದಲಿ
ಕೂಡಿ ಕಾಮನೆಗೊಳುವ ದಿವ್ಯದೃಷ್ಟಿ
ಒಬ್ಬ ಬಂದಿಹನಲ್ಲಿ ಮತ್ತೊಬ್ಬ ಕಾದಿಹನು
ಹಿತ್ತಲಲಿ ನಿಂದಿಹನು ಮಗದೊಬ್ಬನೊಳಗಿಹನು
ಇನಿಬರನು ಮೆಚ್ಚಿಸುವಸುಖದ ಸೃಷ್ಟಿ

ನಿನ್ನೆಯನುಗಮುದ ಕಾಮನೆಯೊಳು ತಪಂಬಡೆದು
ಇಂದಿನೊಲುಮೆಯ ಪೂಜೆ ಪಾರಣೆಯ ಪುಣ್ಯದಲಿ
ನಾಳೆಯನು ಬಿಗಿದಿಡುವ ಚದುರೆಯಿವಳು
ನಿನ್ನೆಯೆಂಬುದು ಸುಳ್ಳು ನಾಳೆಯೆಂಬುದು ಸಲ್ಲ
ದಿಂದೆ ಕಲ್ಪನೆಯ ಚೆಂಗುಡಿಗೆ ದೋಹಳವಿತ್ತು
ಹೂತು ಹಣ್ಗೊಳುವ ಹೊಂಬಾಳೆಯಿವಳು

ಮಾತಿನಲಿ ಮಧು ಸುರಿಸಿ ಗೀತೆಯಲಿ ಬಗೆಯರಿಸಿ
ರೀತಿ ರೀತಿಯ ಕಣ್ಣ ಸನ್ನೆಯಲಿ ಸೂಳರಿಸಿ
ಮಾತು ಬಗೆಗೊದಗದಿಹ ನಿತ್ಯ ಸುಭಗೆ!
ಓತು ಸಂಜೆಯ ತನಕ ಸುಳಿಸುಳಿದು ಸೊರಗಿ ಕೈ
ಸೋತು ನೆಮ್ಮದಿಗಾಗಿ ಬರುವ ಮೇಳಂಬಗಳ.
ಕಾತರಕೆ ಕಣ್ಮಸೆವ ಸಿರಿಸಂಪಗೆ!

ಸೊಬಗಿನಿತ್ತಡಿಗಳಲಿ ಲಾವಣ್ಯ ಪೂರದಲಿ
ಮುಳುಗಿ ಮಿಂದೆದ್ದವನು ಕಿತ್ತಡಿಯೊ ಕಾಮುಕನೊ
ಏನೊ ಪೂಜೆಗೆ ಬಂದ ಪುಣ್ಯವಂತ!
ಈ ಕಡೆಯ ತೀರದಲಿ ತೆರೆಗಳೋಕುಳಿಯಾಡಿ
ಈ ಕೂಲ ತಲ್ಪದಲಿ ತೆರವು ತೆಪ್ಪವನಾಡಿ
ಆವನೋ ನೀರಡಿಕೆಗೊಲಿದ ಪಾಂಥ!

ಇಲ್ಲಿ ಕಾಣುವ ಬೆಳಕು ಬೇರೆ ಗಾಳಿಯು ಬೇರೆ
ಇಲ್ಲಿ ಸೇರುವ ಸುಗ್ಗಿ ಸಿಂಗಾರವಲ್ಲ ವ—
ರ್ಷಾಗಮದ ಪೂರ್ವಿಕೆಯ ತಣ್ಪೆನೊಸಗೆ
ಇಲ್ಲಿ ತೋರುವ ಮಿಂಚು ಗುಡುಗು ಸಿಡಿಲಿನ ಸಂಚು
ಸಣ್ಣ ಹನಿ ಸೋರುಮಳೆ ಹಿಂಗಾರು ಮುಂಗಾರು
ನಡುವ ಸೆಮ್ಮದಿಗಲ್ಲ—ಸೂರೆ ಸುಲಿಗೆ!

ಇಲ್ಲಿ ಮಾತಾಡಿದರೆ ಕಿವುಡೆನಿಸಿ ಮುಂದೆ ನಡೆ
ಇಲ್ಲಿ ಕಣ್ಣಾಡಿದರೆ ಕುರುಡೆಂದು ಹಿಂದೆ ನಿಲು
ಇಲ್ಲಿ ಸೋಲ್ಗೆಲವುಗಳ ಕಂತೆ ಬೇಡ
ಇಲ್ಲಿ ಹೊಗಳುವ ಮಾತಿಗಾಗಿ ಹೆಚ್ಚಳಿಸದಿರು
ತೆಗಳು ತಳತಂತ್ರದಲಿ ಸಿಲುಕದಿರು, ಕಾದಿರುವ
ಬಿಡುಗಣ್ಣರಿವರು ಬಾಯ್ದೆರೆಯ ಬೇಡ !

ಇವಳತ್ತ ನೋಡದಿರು, ನೋಡಿದರೆ ಸೋಲದಿರು
ಸೋತು ಬಳಿಸಾರದಿರು, ಸಾರಿ ಸುಖಕೆಳಸದಿರು
ಬದುಕಿದರೆ ನೀನೆ ಹೂಗಣೆಯನಯ್ಯ !
ಮಾತು ಜೇನಿನ ಮುದ್ದು ಮಮತೆ ಮಯಣದ ಗೂಡು
ಪ್ರೀತಿ ಪರಮೆಯ ರೀತಿ ಕುಡಿಕುಡಿದು ತಣಿಯದಿದೆ
ತಣಿದಾಗ ಹೂವು ನಿಸ್ಸಾರವಯ್ಯ !

ಅದೊ ನೋಡು ! ಮುಗಿಲೊಂದು ಮೇಲಮೇಲಕೆ ಸಂದು
ಕಡಲಿನಾಳವನಳೆದು ಬೆಟ್ಟದುದಿಗಳನೇರಿ
ತುಂಬು ನೀರಬ್ಬರದೆ ಮೆರೆದುದೇನು !
ಅದು ಬದುಕು ಹೊತ್ತಿಗೆಯನುರಿಸಿ ತೀರಿದ ಮೇಲೆ
ಜೀವನಂಬರಿದೆನಿಸಿ ಮತ್ತೆ ಬಾನತ್ತ ಕಡೆ
ಬೆಳ್ಳನ್ನ ತೇಲಿ ಬೆಂಡಾದುದೇನು !

ಬಾನಕಡೆಯುಳ್ಕರಿಸಿ ಹೊಸ ಬೆಳಕು ಮೂಡಿತ್ತು
ಬಿಸುಗಾಳಿ ಮೆಲ್ಮೆಲನೆ ತೀಡಿತ್ತು, ದಡದಡಸಿ
ಆವಳೋ ಮೈದೂಗಿ ನಡೆದಿರುವಳು !
ಬೆಳಗಿನಾ ಬಿಸಿಲಿನಲಿ ಮೇಲ್ಸೆರಗ ಮುಸುಕಿಕ್ಕಿ
ಹೊಸತು ಹೂದೋಟದಲಿ ತಣಿದ ತುಂಬಿಯ ರೀತಿ
ಹೃದಯದಾನಂದದಲಿ ನಡೆದಿರುವಳು !

೧೬—೧೧—೧೯೪೭

---

## ನಿರೀಹ

ದಾರಿ ಕವಲೊಡೆದಲ್ಲಿ ಆರಿಗೋಸುಗವೊ ಕ-
ಣ್ಣೀರುಕ್ಕಿ ಬರೆದಿಹುದು ಬದುಕಿನೀ ಕಂತೆ
ಬಾರಿಬಾರಿಗು ಸೆಳೆವ ನಿಟ್ಟುಸಿರ ಸೇದೆಯಲಿ
ಸೇರಿ ಸಾಗರವಾಗಿ ಕುದಿವ ಕಡುಚಿಂತೆ

ನೆಚ್ಚು ನಿಚ್ಚವು ಕಾಂಬ ಕಸವಲ್ಲ. ಹೃದಯದಲಿ
ಪುಟಪುಟಿದು ಹೊಮ್ಮಲಿಹ ಪುಣ್ಯಪರಿಪಾಕ
ಹುಚ್ಚು ಹರಯದ ಕುಣಿತ ಕಳೆದಿಹುದು. ಕರಣದಲಿ
ಹೆಚ್ಚಿಹುದು ಹೂಹರುಷದಮರ ಮೃದ್ವೀಕ !

ಏನೊ ಕಂಡಾ ಕಡೆಯ ಕಲ್ಪನೆಗೆ ನೀಳ್ಕರಿಸಿ
ನಿಲುವ ಮಿಗದಂತೆ ಮುನ್ನೋಡುತಿದೆ ಮಮತೆ
ಏನೊ ಸುಖಸೌರಭದ ವೇದನೆಯೊಳನುವರಿಸಿ
ತೊಳಲುವಳಿಯಂತೆ ಮಿಡಿದಿಹುದು ಹೃದ್ಗೀತೆ

ದಾರಿ ಕವಲೊಡೆದಲ್ಲಿ ಆರಿಗೋಸುಗವೊ ಕ—
ಣ್ಣೀರಾಗಿ ನನೆದಿಹುದು ಬಾಳಿನನುಬಂಧ

ಬಾರಿಬಾರಿಗು ಮನಸಿನೇರುಮೆಟ್ಟಿಲನೇರಿ
ಕೋರಿ ಕಾದಿದೆ ಚಿರನಿರೀಹದಾನಂದ !

೧೮—೧೧—೧೯೪೭

## ಅತಿ ಮಹೋನ್ನತಿಗೆ—

ದೇವನೆಂದರಿತು ನಾನಿಂದು ನಮಿಸಿಹುದಲ್ಲ
ದೇವನಿಗು ಮಿಗು ಮಾನುಷತ್ವಕಾಗಿ
ಕಾಡಿನಲಿ ಬಗೆಯರಿದ ತಪದ ಭೂಮಿಕೆಗಲ್ಲ
ನಾಡಿನಲಿ ಹರಿವ ಗೀತೆಯ ತತ್ವಕಾಗಿ

ಗೋಕುಲದ ಕೇರಿಗಳ ಕೊಳಲ ಕೇಳಿಹುದಿಲ್ಲ
ಪ್ರೀತಿಯ ಪ್ರತಿಧ್ವನಿಯನರಿತಿರುವೆನು
ಲೋಕದಲಿ ಮೈವಡೆದ ಮಹಿಮೆಗಳ ಕಂಡಿಲ್ಲ
ಗೈಮೆಗರಿಗೊಂಡುದನು ನೋಡಿರುವೆನು

ಆ ನಚ್ಚು ಆ ನೆರವು ಕಳೆದಿಹುದು, ಜಗವಿಂದು
ಗಜರುತಿದೆ ಮುಗಿದ ಜೇನ್ಗೂಣದ ರೀತಿ
ಹಗೆತನದ ಕತ್ತಲಲಿ ನಗುವ ಮಾಯಕವಾಗಿ
ಕರೆಯುತಿದೆ ಕರ್ತವ್ಯದಮರ ಶಕ್ತಿ !

ದೇವನೆಂದರಿತು ನಾನಿಂದು ವಂದಿಪುದಲ್ಲ
ದೇವರೋ ದೈತ್ಯರೋ ಅರಿಯದಿರುವೆನ್
ದೇವ ದಾನವರತ್ತ ನರನನುಳಿಸಿದ ನಿನ್ನ
ಅತಿ ಮಹೋನ್ನತಿಗೆ ನಾನ್ ಕೈಯಮುಗಿವೆನ್ !

೨೯—೧೧—೧೯೪೭

# ಅಭಿಲಾಷೆ

ಒಂದು ಚಣ ಬೀಣೆಯಿದನಲುಕಿನೋಡು !—ಈ
ಮಂದ್ರದಲಿ ಕೋಗಿಲೆಯ ಕೊರಳು ಕೂಡು

ಆರಿಗೋಸುಗವೇನೊ ತಂತಿಗಳ ಬಿಗಿದಂದು
ಕಾದರೂ ಕಂಡಿಲ್ಲ ಕರೆವ ಜೋಡು
ಆರಿಗೋಸುಗವೆಂದು ದಾರಿನೋಡುವ ಮುನ್ನ
ಕಿರುವೆರಳ ಮಿಡುಕಿನಲಿ ಮಿಾಂಟಿನೋಡು

ಮಿಾಂಟಿದನಿಗೂಡಿದರೆ ಹೃದಯ ಹುಚ್ಚಾಡಿದರೆ
ಒಂದು ಹಾಡನು ಮಮತೆಗಾಗಿ ಸಲಿಸು
ಕಣ್ಣ ಕೊನೆಯಲಿ ಸುರಿವ ಕಂಬನಿಯ ಕಲ್ಪದಲಿ
ಒಂದು ಮಾತನು ಮೌನವಾಗಿ ನಿಲಿಸು

ಇಲ್ಲಿ ಬೆರಳಾಡಿದರೆ ಇಲ್ಲಿ ಶ್ರುತಿಗೂಡಿದರೆ
ಇದು ನಿನ್ನದೆಂದು ಮತ್ತೊಮ್ಮೆ ಹಾಡು
ಇಲ್ಲಿ ಮೂಡುವ ಭಾವ ನಿನ್ನೆದೆಗೆ ತೀಡಿದರೆ
ಈ ಬಾಳಿನತ್ತಲೊಳಗಿಣಿಕಿ ನೋಡು

ಒಂದು ಚಣ ಬೀಣೆಯಿದನಲುಕಿ ನೋಡು !—ಈ
ಬಂಧನಕೆ ದಿವ್ಯತೆಯ ನೆರವು ನೀಡು !

೧—೧೨—೧೯೪೭

## ಬಲಿದಾನ

೧

ಕತ್ತಲೇಕಾಯ್ತೆಂದು ಬಾನತ್ತ ನೋಡಿದೆನು
ಅದು ದಿನದ ಮೊದಲ ಹೊತ್ತು
ಮುಂಬೆಳಗು ಕಳೆದಿಲ್ಲ ತಂಗಾಳಿನಿಂತಿಲ್ಲ
ಸ್ವಾತಂತ್ರ್ಯದುದಯವಿತ್ತು

ಹರುಷಗೊಂಡಾ ಕೂಗು ತಣಿದ ಬದುಕಿನತೇಗು
ತೋರಿಹುದು ಬಾನಿನತ್ತ
ವರುಷ ವರುಷದ ಹಿಂದೆ ಕಾದಿ ಸತ್ತವರೇನು
ಸೇರಿಹರು ದಿವದ ಸುತ್ತ

ದೆಸೆಯೇಂ ನಿರಭ್ರವದು ಗುಡುಗು ಗುಡುಗಿತು ಗಜರಿ
ಸಿಡಿಲು ಮುಸಗಿತು ವಿಶ್ವಕೆ !
ಆರೊ ಶಾಂತಿಯ ಕೊಲೆಗೆ ಕೈ ಮಿಂಚಿದಪಚಾರ
ಸಿಡಿದುದಾಹಾ !—ಜನತೆಗೆ !

೨

ಧರ್ಮ ಸಿಂಹಾಸನದಲೇಸು ಬುದ್ಧರ ನಡುವೆ
ಕುಳಿತಿರುವ ನಾವನೊಬ್ಬ ?
ಎದೆಯುಡಿಯುಲಿಳಿವ ಹೊಸರಕ್ತದಭಿಷೇಕದಲಿ
ಧಗಧಗಿಪ ಮುದುಕನಬ್ಬ !

ಮುಖದನಗೆ ಹಿಂಗಿಲ್ಲ ಕಣ್ಣು ಕೆಂಪಾಗಿಲ್ಲ
ಕೊಲೆಹೊಲೆಗೆ ಹೊತ್ತ ಮೌನ
ಕ್ಷಣಿಕದಾವೇಗದಲಿ ಚಿರತತ್ವವಳಿದಿಲ್ಲ
ಕೃತಕೃತ್ಯದೊಂದು ಗಹನ !

ಜೀವಿತದ ಧರೆಯದುರಿ ರಾಜ್ಯ ರಾಜ್ಯಗಳುರುಳಿ
ಕೆಡೆದಾಗ ಬಂದನಾತ
ಜೀವನದ ಮಾರ್ಗದಲಿ ಸೇವೆಯೊಲವಿನ ಸೊಡರ
ನಿತ್ತಿರುವ ದೇವದೂತ !

೩

ಜಗವನಾಳ್ದವರುಂಟು—ಜನರನಾಳ್ದವನೊಬ್ಬ
ಅವನೆ ಜನಮನ ನಾಯಕ
ಶಾಂತ ಸೌರಭದ ಸುತ್ಯಾಗತರ್ಪಣಕಾಗಿ
ತಳೆದಸಹ ಶುಭಸಾಯಕ !

ಸತ್ಯಕೊಂದರ್ಪಿತವಹಿಂಸೆಗಿನ್ನೊಂದು ಸೌ-
ಹಾರ್ದ ಸೇವೆಗೆ ಮೂರು ಗುಂಡು
ಕಾಯ ಕಲ್ಪನೆ ಮಾತು—ಮರಣವೇನುಂಟದಕೆ ?
ಸೋತವನೆ ಗೆಲಿದ ಗಂಡು !

ಕೊನೆಯ ಸೇವೆಗೆ ನೀರಧಾರೆ ಸುರಿದಂತೆ ನಿ-
ಶ್ಚಲದ ಬಲಿ ಜೀವದಾನ
ಅಸತಿನಿಂ ಸದ್ಗಮಕೆ— ಕತ್ತಲಿಂದುಜ್ವಲಕೆ
ನಡೆದನೊ ಜಗತ್ಪಾವನ !

೭—೨—೧೯೪೮

# ಬಾಲಿ ಕನ್ನಿಕೆಯರು

೧

ಬಾಳ ದೇಗುಲದತ್ತ ನಾಲ್ವರೂ ನಿಂದಿಹರು
ಬೆಳಕನರಸುತ್ತ ಸುತ್ತ
ಮೊದಲ ಬೈಗಿನ ಹೊತ್ತು ಗೆಲವಿನೆಣಿಕೆಯ ಹೊತ್ತು
ನೋಡಿದರು ಸುತ್ತ ಮುತ್ತ

ಮಲರಮಿದುನೋಟದಲಿ ಮಧು ಸುರಿದ ರೀತಿಯಲಿ
ಸವಿಯಾಯ್ತು ಬಾಳನೆನಪು
ಕವಿಯ ಕಲ್ಪನೆಯ ಚೆಲುತನದ ರಸಗೀತಿಯಲಿ
ಸೊಗಸಾಯ್ತು ಕೆಂಪು ಕದಪು

ಅಹ—ಸುಖದ ಸಂತೋಷ ಮಧುಕರನ ಮೇಳದಲಿ
ಮೊನೆಗೊಳಲು ಕಾದಸಮಯ
ಅಹರಹರ್ಧ್ಯಾನದಲಿ ಮುಹುರ್ಮನಸಿನಾಳದಲಿ
ನನೆಗಂಡ ಮೌನವಿಜಯ !

ನಾಲ್ಕು ದಿಕ್ಕಿನ ಕಡೆಗೆ ನೀಳ್ಕರಿಸಿ ಕಾದವರು
ಕಾದವರು ಕುಣಿಕುಣಿತಕೆ
ಏತಕೋ ಮಳೆಸೆಳೆಗೆ ನೋಂತ ನವಿಲಾಗಿಹರು
ನೂಪುರದ ಮಣಿರಣಿತಕೆ !

೨

ಚೆಲುಮೊಗದ ಚೆನ್ನೆಯರು ಕಾಂತಿ ಸಂಪನ್ನೆಯರು
ತೊಡರೇಕೆ ಬೇಕಿವರಿಗೆ?
ತುಂಬು ಮೈಮಂಟಪದ ಬಿಗಿದ ಮೊಲೆಗಟ್ಟಿನಲಿ
ಅರೆಬತ್ತಲಾದವರಿಗೆ?

ಮನಸು ಮಲ್ಲಿಗೆ ಹೂವು ನಸುಕು ಚೆಲ್ಲಿದ ಚೆಲುವು
ಮೈ ಕೈಯೆ ಮೃದು ಕಲ್ಪನೆ !
ತಮತಮಗೆ ತಾವ್ ಮೆಚ್ಚಿ ನಗೆಯ ಹೊದಿಕೆಯ ಹೊಸೆಯು
ತಿರುವ ಬಯಕೆಯ ಕಮ್ಮನೆ !

ಹಿಂದಿನವಶೇಷಗಳ ಸಂಸ್ಕಾರದುಯ್ಯಲೆಯ—
ನೇರಿರುವ ತಾರುಣ್ಯವು
ಅದೆಗಹನ—ನಡೆನುಡಿಗಳಾದರದ ನಿಚ್ಚಟದ
ನೆಳಲಿನ ಮಹಾರಣ್ಯವು !

ನಡೆಯೆ ನಾಟ್ಯದ ಪಾಂಗು ನುಡಿಯೆ ಗೀತಿಯ ಗುಂಗು
ಇವರಾವ ಕಿನ್ನರಿಯರು?
ಕನಸು ನೆನಸನು ಮಿಡುಕಿ ಮೌನಗೊಂಡಿಹರೇಕೆ?
ಅರೆ—ಬಾಲಿಕನ್ನಿಕೆಯರು !

೩

ಮಳೆಗಾಳಿ ಸುಳಿದಿಲ್ಲ ಗುಡುಗು ಗುಡುಗುಡಿಸಿಲ್ಲ
ಇಡು ಹೆಜ್ಜೆ ಕುಣಿದಿರುವುದು
ಒಳಗಡೆಯ ದೇಗುಲದ ಡಮರು ಡಮಡಮವಾಯ್ತು
ತನು ತಾನೆ ಮಣಿದಿರುವುದು

ಕೈಮುಗಿದು ಮೈತೂಗಿ ಸಿರಿಮುಡಿಯ ತಲೆಬಾಗಿ
ಕುಣಿವ ಕಲೆಯೇನು ಸೊಗಸು !
ಕುಣಿತವಲ್ಲವು ಭಾವಭಾವಗಳ ಸುಪ್ತಿಯಲಿ
ಬದುಕು ಕಂಡಿರುವ ಕನಸು !

ಡೋಲು ಡಮಡಮಿಸಿತ್ತು ಚೇತನವು ಸಿಡಿದಂತೆ
ತೊಡಗಿತೇನಮಮ ಗೀತ !

ಮೇಲೆದ್ದು* ಸ್ರಂಪಿಯಲಿ ಕೂಡಿಕಣ್ದೆರೆದಿತ್ತು
ಬಾಲಿದೇಶದ ಜೀವಿತ !

ಆ ದೇಶದಚ್ಚರಿಯ ಹರಣಕೊಪ್ಪಿದ ಹೆಜ್ಜೆ
ಆ ಸಹಜ ಸುಂದರಿಯರು !
ಆ ತುಂಬು ತಿಳಿತನದ ಹೃದಯದೊಲವಿನ ಗೆಜ್ಜೆ
ಆ ಬಾಲಿಕನ್ನಿಕೆಯರು !

* ಬಾಲಿದೇಶದ ನಾಲ್ಕು ಜನರ ನೃತ್ಯ ವಿಶೇಷ

೧೩--೨—೧೯೪೪

## ಮಧುರ ಸ್ಮೃತಿ

೧

ಹಲವೊಮ್ಮೆ ನಿನ್ನೆಣಿಕೆ ಬಹುದುಂಟು ದಿವಸದಲಿ
ಮಸಕು ನಸುಕಿನ ನೆನಪು ಮೂಡುವಂತೆ
ಚೆಲುವುಗಂಗಳ ಮೇಲೆ ಹನಿ ಕೂಡುವಂತೆ ಮು-
ನ್ನೆಸಕದಲಿ ಮಿಡುಕುತಿದೆ ಮಧುರ ಚಿಂತೆ

೨

ಬೀಣೆಯಲಿ ಬೆರಳಾಡಿ ನಾದಗೊಂಡಿಹುದಿಲ್ಲ
ಗಾಳಿಯೇ ಸುಳಿದು ದನಿಗೂಡಿಸಿತ್ತು
ಭಾವದಲಿ ಕಾಮನೆಯ ಕಲುಷ ಕಂಡಿಹುದಿಲ್ಲ
ಬಾಳು ತಿಳಿಗೊಳದಂತೆ ತೋರುತಿತ್ತು

೩

ಪ್ರೀತ ಶೃಂಗಾರದಲಿ ಮಾತು ತಡವರಿಸಿಲ್ಲ
ಮಾತು ಮನಸಿನ ಮೆಚ್ಚು ಕೈಗನ್ನಡಿ
ರೀತಿ ನೀತಿಯ ನೇಮ ಕಿಂಚಿದಪಿ ಕಳೆದಿಲ್ಲ
ಓತಹರಯದ ಹುಚ್ಚು ಸೆರೆ ನಿನ್ನಡಿ !

೪

ಅಂದೊಲಿದ ರೂಪು ಕಂಗಳಲಿ ಕಂಡಿಹುದಲ್ಲ
ಅದು ಮನಸು ಮೌನದಲಿ ಕುಡಿದ ಜೇನು
ಇಂದು ಹಲಹಲವು ಹೂಸೊಗದ ಸಜ್ಜೆಯ ಮೇಲೆ
ಮಲಗಿರಲು ಕನವರಿಸುತಿರುವ ಹದನು!

೫

ಹರುಷವಿದು ಸೌರಭವು—ಸುಖವು ಸತ್ಯದ ನೆರವು
ಹೃದಯವಿದು ಶಾಂತವಿದೆ ತುಂಬುನೀರು
ಕಣ್ಣಿನಲಿ ಲಾಲಸೆಯು ಕುಣಿದಿಲ್ಲ—ಕಳವಳವು
ಕವಿದಿಲ್ಲ-ಬಾಳುವೆಯು ಸಂಜೆಯಲರು!

೬

ಆದರೂ ಹಲವೊಮ್ಮೆ ನಿನ್ನೆಣಿಕೆ ಬಹುದುಂಟು-
ಮಳೆಕಳೆದ ಮೇಲೆ ಮಿಂಚೊಗೆವ ರೀತಿ!
ಸಾದರದ ಸಖ್ಯತೆಯ ಫುಲ್ಲ ಪುಣ್ಯಾಂಗಣದ
ರೋದಸಿಯಲೊಂದು—ಮೃದು ಮಧುರ ಸ್ಮೃತಿ!

೬—೩—೧೯೪೮

---

## ರಸಸೃಷ್ಟಿ

ಬಾನು ಕೆಂಪಡರಿತ್ತು ದೆಸೆಬದುಕು ಮುಗಿಲ ಕಣ್
ತೆರೆತೆರೆದು ನಿಚ್ಚಟಂ ನಗುತಲಿತ್ತು
ಮಚ್ಚಂಜೆ ಮೊದಮೊದಲ ಋತುಮತಿಯ ರೀತಿಯಲಿ
ಸೊಗದ ಸಜ್ಜೆಗೆ ಹೆಜ್ಜೆಗೂಡುತಿತ್ತು

೨

ಹಲಕೆಲರು ಹುಚ್ಚಾಟವಾಡಿ ಹಾಡಿದರೇನೊ—
ಕೆಲರು ಕಣ್ಣುಲುಕಿ ನಸುನಕ್ಕರಂತೆ !
ದಿಕ್ಕುದಿಕ್ಕಿನ ಮನೆಯ ಬಾಗಿಲಿಗೆ ಕದನಿಕ್ಕಿ
ಇರುಳ ಸಖಿ ತಲೆಮುಸುಕನಿಟ್ಟಳಂತೆ !

೩

ಮೊದಲ ಮೆಲ್ಲಡಿಯ ಬೆಳ್ಮುಗಿಲು ತೇಲುತ ಬಂತು
ಕಲ್ಪನೆಗಳೇಕಾಂತಕೊದಗಿದಂತೆ
ಆ ಕಡೆಗೆ ಸೆಳೆಮಿಂಚ ಸೊಡರ ಪಂಜನು ಹಿಡಿದು
ಮನ್ಮಥನ ಮನೆಯ ಮುತ್ತೈದೆಯಂತೆ !

೪

ದೂರದೂರದ ಕತೆಯನುಲಿವ ಚಾರಣನೇನೊ—
ಪಿಸುಮಾತನಾಡಿದನು ಮಂದಾನಿಲನ್
ದೇಶದೇಶದ ರಾಜರಾಜರಾ ಸಂದೇಶ
ಸಾದರವನರುಹಿದನು ಕಾಮದೂತನ್

೫

ಮಿಲನಕಿಂದೆ ಮುಹೂರ್ತವೆಂದೆ ಬಾನಟ್ಟದಲಿ
ಕಣ್ಣೈಸಿ ಶಕುನವಾಡಿತ್ತು ಗೂಗೆ !
ಮಂಗಲದ ಮಣೆಯ ರಸರಂಗದಲಿ ಗರಿಗೆದರಿ
ರಂಗವಲ್ಲಿಯನಿಟ್ಟತೇನೊ ಸೋಗೆ !

೬

ಆರಾರ ಹುಮ್ಮನಸಿನೇರಿಳಿತಗಳಿಗೊದಗಿ
ತೋರಿದನು ಮೂಡಲಲಿ ಪೂರ್ಣಚಂದ್ರ

ನೂರು ಸಾವಿರ ಜನರಲ್ಲೊರ್ವನೆ ರಸರ್ಷಿ-ಕಾ
ವ್ಯಾಂಗನೆಯ ಕಲ್ಪನಾ ಪ್ರೇಮಸಾಂದ್ರ !

೭

ಬಾನ ಕೊನೆಯಲಿ ಬೆಳಕು—ಮನಸು ಮನಸಿನ ಕಾಮ
ಕಮನೀಯ ಕಾಂತಾರಗಳಲಿ ಕಂಪು
ತಾನೆಂಬ ಭಾವನೆಯ ಬ್ರಹ್ಮಾಂಡದಾಳದಲಿ
ಹೊಸಕಬ್ಬ-ಹೊಸಹಬ್ಬ-ಹೊಸತೊ ಪೆಂಪು !

೧೬—೪—೧೯೪೮

---

## ಹೂವಿನ ಹಾಡು

೧

ದಿನದ ಮೊದಲಿನ ಮಲರಿನೆಡೆಯಲಿ
ಮನಸು ಮಾತಾಡಿರುವುದೆ?
ಜನರ ಮಂಜುಲ ಮಮತೆಯುಡಿಯಲಿ
ಕನಸು ಕಟ್ಟೊಡೆದಿರುವುದೆ?

ನೆನಪು ನೋಡಿದ ನೋಟ—ನಿಚ್ಚಳ
ವಾಗಿ ಕಣ್‍ಗೂಡಿರುವುದೆ?
ಕದಪುಗೂಡಿದ ಮೋನಮುಡಿಪಿನ
ಮತ್ತು ಜೇನ್‍ಗೂಡಿರುವುದೆ?

ಬಾನುಬಯಲಿನ ಬರಿದುಬಾಳಿಗೆ
ಮೊಳಕೆ ಮೈದೋರಿರುವುದೆ?
ಕಲ್ಪ ಕಲ್ಪದ ಕುಣಿತಕೊದವಿದ
ಕಳಮೆ ಕೈ ನೀಡಿರುವುದೆ?

ಕಣ್ಣನೀರಿನ ರಸದಗಂಗೆಯ
ಹೊನಲು ಹ್ಯೊ ಹರಿದಿರುವುದೆ?
ಮಣ್ಣು ಮಸಣದ ಕರುಳ ಕರುಣಾ
ಕ್ರಂದನವು ಕರೆದಿರುವುದೆ?

ಹಳತು ಹೊಸತಿನ ಕವಲು ಮಾರ್ಗದ
ದೀಪ ಧಗಧಗಿಸಿರುವುದೆ?
ಬೇಡ ಬೇಕೆಂಬೆರಡುಮನಸಿನ
ಮಿಡಿತ ಮಾತಾಡಿರುವುದೆ?

ಸುಳಿವ ಗಾಳಿಗೆ ತೇಲುಮುಗಿಲಲಿ
ಬದುಕು ಗರಿಗೆದರಿರುವುದೆ?
ಅಳುಕುಲಜ್ಜೆಯ ಸಲುಗೆ ಸಜ್ಜೆಯ
ಸೊಗಸು ಕದದೆರೆದಿರುವುದೆ?

೨

ದಿನದ ಮೊದಲಿನ ಮಲರಿನೆಡೆಯಲಿ
ಬೆಳಕು ಪಿಸುಮಾತಾಡಿದೆ!
ಬಿಸಿಲು ಬಯಲಿನ ಬೆಚ್ಚನಾಟದ
ಹಕ್ಕಿ ಮೆಲುದನಿಗೂಡಿದೆ

ಪೊದರಿನೆಡೆಯಲಿ ಕಾಣದಲರಿನ
ಕಮ್ಮನೆಯು ಕೈ ಮೀರಿದೆ
ಎಸಳ ಬಾಯ್ದೆರೆಯದುರಿ ತುಂಬಿದ
ಹುಮ್ಮುತುಂಬಿಗೆ ಸಂದಿದೆ

ಪರರ ಸೇವೆಗೆ ಸಂದ ಚಾಗದ
ಚರಿತೆ ಶಾಶ್ವತವಾಗಿದೆ

ಜಡತನದಿ ಚೇತನದ ತಂತಿಯು
ಬಿಗಿತ ವಿಶ್ವವ ಮಿಡುಕಿದೆ

ಹಾಡು— ಹೊಸ ಹೊಸ ಹಾಡು ಹರಿದಿದೆ
ಹಾಡ ಬೇಕೆಂದಿರುವಿರೆ?
ನೋಡ ನೋಡುತ ಜಗುಳ್ದ ಹೂವಿನ
ಹಾಡನೇನರಿತಿರುವಿರೆ?

ನೋವು ತೊಟ್ಟಿನ ಹುಟ್ಟು ವೊಳಕೆಯು
ಬಳ್ಳಿ ಬಿನ್ನಣವಾಗಿದೆ
ನೋವ ನೋವೆಂದೆಣಿಸದನಕವು
ನೋವೆ ನಿತ್ಯವು ನೋಂತಿದೆ

ಹುಟ್ಟು ಬಯಕೆಯು ಸೋರುಸೆರಗಿಲಿ
ಬರಿದೆ ಬೇಡುತ ಬಳಲಿದೆ
ಕಟ್ಟ ಕಡೆಯಲಿ ಸಾವು ಬಾಗಿಲ
ತೆರೆದು ಬಾಳನು ಕರೆದಿದೆ

೨೨—೭—೧೯೪೮

## ರಸನಿಮಿಷ

೧

ಅತೀತ ಕಾಲದ ಸುನೀಲ ಗರ್ಭದೆ
ಹೊಮ್ಮಿದೆ ಹೊಸ ಬೆಳಕು
ಅಯಾಚಿತಾಶೆಯು ನಿರೂಪರಮ್ಯತೆ
ನೆಮ್ಮಿದೆ ದಶದಿಕ್ಕು

ಅಮಂದ ಮಂಜುಳ ಸುಖಾಂತ ಸೃಷ್ಟಿಗೆ
ಕಳೆದಿದೆ ಕಣ್ಣ ಪರೆ
ಅಹರ್ವಿಕಾಸದ ಸ್ವರೂಪ ಸಿದ್ಧಿಗೆ
ಸಂದಿದೆ ಬದುಕು ಸೆರೆ

ಅನಂತ ರೂಪದ ಸುಮಾಂತಲಾಳಕೆ
ನಿಲುಕಿದೆ ಮನ್ಮನಸು
ದಿಗಂತದಾಚಿನ ಅದೃಶ್ಯದಂಚಿಗೆ
ನೆಗೆದಿದೆ ಹರಿಣ ಶಿಶು

೨

ಅನೂಹ್ಯಮಾನದ ವಿವಿಕ್ತ ವಾಸಕೆ
ಸಿಡಿದಿದೆ ಪ್ರಣಯ ಸುಖ
ಅಗಾಧ ಕಲ್ಪದ ವಿಚಿತ್ರ ವೇಗಕೆ
ಕೆಡೆದಿದೆ ಮೃತ್ಯು ಮುಖ

ಅಯೋಗ ಯೋಗದ ವಿರಕ್ತರಾಗದ
ನಾದಕೆ ನೆರೆದ ರತಿ
ಅಭುಕ್ತ ಭೋಗದ ಅಸಕ್ತಸಂಗಕೆ
ಸೋತಿದೆ ಮಧುರ ಮತಿ

ಅಂತದ್ರ ಮೋಹದ ರಹಸ್ಯ ಮೋದಕೆ
ಕಾದಿದೆ ಹೊಸ ಹರಣ
ನಿಗೂಢ ಮೌನದ ಅಬೋಧ ಸ್ಪರ್ಶಕೆ
ಮಿಡಿದಿದೆ ಮೃದುಕರಣ

೩

ನಿತಾಂತ ಮೇಳದ ಭವಾಂತರಂಗದೆ
ನೆರೆದಿದೆ ಮಧು ಸಮಯ

ವಿಶಾಲ ದೃಷ್ಟಿಯ ವಿಚಾರ ವೈಖರಿ
ತುಂಬಿದೆ ಯುವ ಹೃದಯ
ಪ್ರಮೋದ ಚಂಚಲ ವಿಲೋಕನಾಂಚಲ
ವಿಡಿದಿದೆ ಹೆಣ್ಬಯಕೆ
ವಿಲೋಲಿತಾಶಯ ಸಮುದ್ರ ಮಧ್ಯದೆ
ನಿಂತಿದೆ ರತಿ ನೌಕೆ

ಸದಾನುಕೂಲದ ಮನೋದುಕೂಲದ
ಮೌನದ ಮುಚ್ಚು ಮರೆ
ವಿಲಾಸ ಲಜ್ಜೆಯ ಹಸಾದ ಹೆಜ್ಜೆಯ
ಹಿಡಿತದ ಭೋಗ ಸುರೆ

೪

ಇದೇನು ಸಂಭ್ರಮ ಇದೇ ಮನೋರಮ
ಜೀವನದನುಬಂಧ
ಸವಿಾಹ ಪುಷ್ಪದ ಸಹಾಸ ಸಮ್ಮತಿ
ಸುರಿದಿಹ ಮಕರಂದ

ನವೀನ ರಾಜ್ಯದ ನಿಯೋಗ ಭಾರಕೆ
ತೂಗಿದೆ ತರುಗುಲ್ಮ
ರಸಾಧಿದೇವಿಯ ಕೃಪಾನುಭಾವಕೆ
ಜಿನುಗಿದೆ ಜನ ಜನ್ಮ
ಅಪಾರ ಸತ್ಯದ ಅಪೂರ್ವ ವೈಭವ
ವರಿವುದೆ ರಸ ನಿಮಿಷ
ಗಭೀರ ರಾತ್ರಿಯ ಅಚಿಂತ್ಯ ಯಾತನೆ
ಮರೆವುದೆ ಮಧುರ ವಶ

೨೧—೧೧—೧೯೪೪

# ದುರಂತ

ಉಂಡು ಮಧ್ಯಾಹ್ನ ಮಲಗಿದ್ದೆನರೆ ನಿದ್ದೆಯಲಿ
ಏನೇನೊ ಕನಸು ಕಟ್ಟಳೆಗಳೆವ ನೀತಿಯಂ
ತೋಲೈಸಿ ಬಂದಿತ್ತು. ಬೇಕು ಬೇಡೆಂಬೆರಡು
ಹೊಸಿಲ ಮೇಲಿಟ್ಟ ಹೆಜ್ಜೆಯಲಿ ಹೊಂಬೆಳಕು ಬಾ—
ಳಂಗಳದ ಮೂಲೆಯಲಿ ಹುದುಗಿದ್ದ ಕತ್ತಲಿನ
ಕೈಕುಲುಕುವಂತಿತ್ತು. ಲೋಕಲೋಕದ ಸುತ್ತ
ಮುಸ್ಸಂಜೆ ಕವಿದಂತೆ ಕೆಂಪುಬಾನಿನ ಮೇಲೆ
ಬರೆದ ಕಾಮನಬಿಲ್ಲು ಜಗದ ಹಣೆ ಬರಹವೇ
ನೆಂಬಂತೆ ಕಂಡಿತ್ತು. ಸಾಕೂತ ದೃಷ್ಟಿಯಲಿ
ನಾಲ್ಕುದೆಸೆಯಲಿ ಬಳಸಿದೋಕುಳಿಯ ನೀರಿನಲಿ
ತೇಲುತಿಹ ಮುಗಿಲು ಹಾಯ್ ಹಡಗುಗಳ ಮೇಲಿಂದ
ಕೆಳಗಿಳಿದು ಬಹ ಹಕ್ಕಿಪಕ್ಕಗಳ ಗಾಳಿಯಲಿ
ದಿವದ ಪುಷ್ಪದ ಪುಣ್ಯಪೀಯೂಷ ಪರಿಮಳವು
ಗಾಳಿಗೂ ಹಗುರಾಗಿ ಮನಸಿಗೂ ಮಿಗಿಲಾಗಿ
ಸಂಜೆಗನ್ನೆಯರ ಕೆಂಗೆನ್ನೆಯಲಿ ಕೂಡಿದ್ದು
ದನು ಕಂಡೆ. ಕಂಡೆನಾ ಸೌಸವವು ಹೆಣ್ತನದ
ಬಯಕೆಯಲಿ ಬಳಿಪಂದು ತೋಳ್ಬಿಗಿತದಲಿ ತೂಗಿ
ಹಕ್ಕಿಗಳ ಮೆಲ್ದನಿಯ ಮಿದುಮಾತಿನಲಿ ಬಾಗಿ
ಬಾಸಣಿಸಿ ಸೊದೆಯುಗುವ ಚೆಂದುಟಿಯನರೆದೆರೆದು
ನಲ್ಮೆಯಲಿ ನಸುನಗಲು ತಿಂಗಳನತಂಬಾಲು
ಚೆಲು ಚೆಲ್ಲಿದಂತಾಯ್ತು. ಪುಳಕ ರಿಂಗಣವಾಯ್ತು!
ರೋಮ ರೋಮದ ರಂಧ್ರಗಳಲಿ ಕಣ್‌ಕಣ್ಕಲೆತು
ನಾನೆ ಸಗ್ಗಿಗನಾಗಿ ಹಿಗ್ಗಿದೆನು ಸುತ್ತಲಿನ
ಬಳ್ಳಿ ಕೈಮ್ಮೈ ತೂಗಿ ತಾನೆಯುಚ್ಚರಿಯಾಯ್ತು.

ನನ್ನ ಚೆಲುರಾಣಿ--ಇಂದ್ರಾಣಿ—ಕವಿತಾ ರಮಣಿ
ಮನ್ಮನೋರಮೆ ಮಧುರ ಸೀಮೆ ಗುಣನಿಸ್ಸೀಮೆ
ಮುದ್ದು ನಗೆಯಲಿ ತಿಣ್ಣ ತುಟಿಯು ಹೊಂಗನಸುಗಳ
ಹೊಳಪಿನಲಿ ಕಡೆಗಣ್ಣ ನೋಟ ನಿಚ್ಚಳವಾಗಿ
ಮಿಂದೆದ್ದು ಬಂದಂತೆ ಹೆಜ್ಜೆಯಲಿ ತಾಳ ಮನ
ದಿಚ್ಚೆಯಲಿ ಮೇಳ ಮೆಲುಸುಯ್ಲಿನಲಿ ಸಂಗೀತ
ನಡೆನುಡಿಗಳೊಮ್ಮತದ ಮಧುರಸುಖ ಸಮ್ಮತದ
ಸಾದರದ ಸೆಲೆಯರಿತು ಸಾಹಿತ್ಯ ಕಲೆವೆರತು
ಬಂದಳು ಭವೋನ್ನತಿಗೆ! ತುಂಬು ಕಡಲೇಳ್ತರಕೆ
ಸಲುವ ತಂಗದಿರಂತೆ! ಕೆಲಬಲದ ಕಾಮಿತವು
ಕೈಮುಗಿದು ನಿಂತಿತ್ತು. ರಾಗರತಿ ಕುಣಿದಿತ್ತು
ಶೀಲ ಶಾಲೀವನದ ಕಳಮೆ ಕೈಗೆಟಕಿತ್ತು
ಕಲ್ಪನಾಶೃಂಗದಲಿ ಕಾಮಧೇನುವನರಸಿ
ಕಲ್ಪವೃಕ್ಷದ ನಿತ್ಯ ಸಫಲತೆಯನನುವರಿಸಿ
ಶೃಂಗಾರ ಪರಿಣತಿಯ ಸೊದೆಯ ಸೇಚನೆಯ್ಯೆಸಿ
ಅಮರಲೋಕದ ದಿವ್ಯ ದರ್ಶನದೆ ಮೈಮರೆದು
ಮುಂದೆ ನೋಡಿದೆನಲ್ಲಿ—ನನ್ನ ಪಾಪದ ರೂಪ
ಕಲ್ಲಾಗಿ ಬಿದ್ದಿತ್ತು; ದೀನ ರೋದನದ ಶ್ರುತಿ
ಶಾಪದಲಿ ರೋದಸಿಯೆ ಕರಗಿತ್ತು. ಕಾಮನೆಯ
ಕಲ್ಲಾಗಿ ಬಿದ್ದಿತ್ತು--ಅಲ್ಲಿ ಭೂತಳದಲ್ಲಿ!
ನನ್ನ ಹೃದಯದ ತರುಣ ತಾಮಸದ ಕಾಠಿಣ್ಯ
ವಸುರತೆಯನಾಂತು ನೆಗೆನೆಗೆದಿತ್ತು. ಬೆಂಬಿಡದೆ
ಸುಳಿದಿತ್ತು ಕೊಲೆಯ ಹೊಲೆ! ಕುಡಿದಮೃತವೆಲ್ಲ ಮೈ
ಬೆಮರಿ ನೀರಾದತ್ತು. ರೋಮ ರೋಮಗಳೆಲ್ಲ
ನಿಗುರಿ ಮುಂಗಾಣದಿದೆ. ಶಚಿಯೆಲ್ಲಿ? ಶುಚಿಯೆಲ್ಲಿ?
ರುಚಿ ರಚನೆ ಸುಖ ಸಹನೆ ಸೌಂದರ್ಯ ಸಾಯುಜ್ಯ

ಸರ್ವಂ ಸಮಾಧಿಯಲಿ ಕೊನೆಯಿರದ ವ್ಯಾಧಿಯಲಿ
ಕೆಡೆದಿಹುದು! ಕಾಮಧೇನುವು ಬರಡು. ಕಲ್ಪಲತೆ
ಸುಟ್ಟುಳಿದ ಹಿಡಿಬೂದಿ. ಸೊದೆಯುಗಂಗಳ ಬರಿದು
ಬರಿನೊ ಬ್ರಹ್ಮಾಂಡವಿದು. ಪಾಪ ಲೋಕದ ಪೂರ್ಣ
ಯಾತನೆಯ ಪಂಜರವೊ! ಇದರ ತಾಪವನಳಿಸೆ
ದಿವ್ಯ ಗಂಗೆಯ ಧವಳ ಕೀರ್ತಿ ಕೈಸಾಲದಿದೆ
ತೊಳೆ ತೊಳೆದ ಕಲ್ಮಷಂ ಕಲೆತು ಕಾಲಿಮೆಯಾಗಿ
ಕದಡಿಹುದು! ಮುನ್ನೋಡೆ ದಿಕ್ತಟದ ಹೊಂಬಣ್ಣ
ಭಾರತದ ಭುವಿಯಂತೆ ರಕ್ತಗೆಂಪಡರಿತ್ತು
ವಿಕೃತ ವರ್ಣದ ಮೇಘವಾವರಿಸಿ ಬರುತಿತ್ತು!
ಕಿರುವಕ್ಕಿಗಳ ಕೂಗು ಹೂಗಳಳಲಿನ ಸೋಗು
ಕಾಳ್ಮರದ ತುದಿಯ ಕೆಂಪಿನ ಕಿಚ್ಚು ಕತ್ತಲಿನ
ಕೂಟದಲಿ ಕಲೆಕಲೆತು ರುದ್ರ ಗಾಂಭೀರ್ಯದಲಿ
ಹೆಜ್ಜೆಗೊಂಡಿತ್ತು! ಮೂಲೋಕವನು ಹಗೆತನದ
ಹೊಗೆ ಬಳಸಿ ಬದುಕಿನಲಿಬೆಸೆದ ಚೆಲುನೋಟ ಸೌ—
ಜನ್ಯ ಸುಖ ಸಂತೋಷ ಸೇವೆ ಸದ್ಧಮ ಸುಕೃತ
ಕರುಣೆ ಕನಿಕರ ಕರ್ಮಧರ್ಮಗಳ ಸತ್ಫಲವ
ನೀರ್ಷೆ ನಿಷ್ಠುರ ದುಃಖ ದೈನ್ಯದೈತ್ಯತೆ ಹಿಂಸೆ
ಕೊಲೆಯ ಕೈಗೋಲಿಂದಲೆಳೆದು ದೌರ್ಜನ್ಯದಲಿ
ಎದೆಗುದಿಯ ಕಾವಲಿಯ ಕಣ್ಣೀರಿನಲಿ ಹುರಿದು
ಹೊತ್ತಿಸುವ ಹದನೇನು! ಜನತೆ ಜಂತುಗಳೆಂಬ
ಮಾತು ಹುಸಿಯಾಯ್ತು. ಕೋಡಿಗೆ ಕೋಡು ಕೈಗೆ ಕೈ
ಕದನದಲಿ ಪಶುಬಲದ ನಿರ್ಣಯಕೆ ಹರಿದ ವೈ
ಸುರಿನಬಿಸಿರಕುತದಲಿ ವಿಕಟಾಟ್ಟ ಹಾಸದಲಿ
ಪುಣ್ಯ ಭೂಮಿಯ ದಿಗ್ದಿಗಂತವದುರಿತು! ಪಾಪ
ಭಾರದಲಿ ಕುಸಿದಿತ್ತು ಕೈಲಾಸ- ಕೈಲಾಸ

ದಧಿನಾಥನೆತ್ತಲೋ! ಈ ಕೊಲೆಯ ಕೈತೊಳೆಯ
ಲಾವತೀರ್ಥವು ಬೇಕೊ! ಏನು ದುರ್ಗತಿಯಮಮ
ಕಾಂಬಕಣ್ಣಿದ್ದು ಕುರುಡಾಯ್ತು ಕಿವಿಕಿವುಡು. ಬಾಯ್
ಬಾರದಿದೆ ಮನಸು ಮರ್ಕಟನಂತೆ ಹಲ್ಕಿರಿದು
ಕುಣಿಯುತಿದೆ! ಬಿಗಿವ ಸಂಕಲೆಯೆಲ್ಲಿ? ಸತ್ಯಕೂ
ಸಾವೆಂಬಿರೇನು? ಸೊಗಸಿಗುನಾಶ? ಶೀಲಗಳ
ನಿರ್ನಾಮ? ನೀತಿಗವನತಿ? ನಯಕೆ ನಿರ್ಗತಿಯೆ?
ಈ ಧರೆಯ ಮಾನವ್ಯ ಯಜ್ಞವನು ತಡೆಗಟ್ಟ
ಲಾವ ಬುದ್ಧನು ಬರುವನೆಂದು ಕೆಲರಾಡಿದರು!
ಆವ ಕ್ರಿಸ್ತನು ಕಾಂಬನೆಂದು ಕೆಲರಡಸಿದರು!
ನೋವಿನಲಿ ನಗೆಯಾಗಿ ಬೇನೆಯಲಿ ಬದುಕಾಗಿ
ಯಾವ ಸತ್ಪುರುಷನೈತಹನೆಂದು ನೋಡಿದರು!
ನೋಡಿದರು ಜೀವಿತದ ನೆಲೆಗಾಗಿ—ನಿಶ್ಚಲದ
ಬಾಳ ಭದ್ರತೆಗಾಗಿ-ಪುಣ್ಯಪೀಠಿಕೆಗಾಗಿ
ಮಹತಿಯಾಣತಿಗಾಗಿ—ಮನಸಿನುನ್ನತಿಗಾಗಿ
ನಿತ್ಯ ಸುಖ ನಿರ್ಮಲತೆ ಸತ್ಯದನುಗಮಕಾಗಿ—
ಸಂದೇಹ ಸಂಕೋಚದೆದೆಯ ಕಗ್ಗವಿಯುಳಿದು
ತಿಳಿತನದ ಬೆಳ್ಬೆಳಕಿನಾಗಸದ ನೆಮ್ಮದಿಯ
ನಡೆ ನಡತೆಗಾಗಿ - ಮನದಂಜಿಕೆಯ ಮಾತನೇ
ಮರೆತು ನೋಂತವನೊಬ್ಬನಾತ್ಮ ಸಾಧನೆಗಾಗಿ—
ಕಾಡಗವಿಯಲಿ ಕುಳಿತು ಕೋಡ ತುದಿಯಲಿ ನಿಂತು
ನೋಡ ನೋಡುತ ಮಾಯವಪ್ಪ ಮಾದೇವನವ
ನಲ್ಲ! ಎಲ್ಲರ ನೆಲೆಗೆ ಬಾಳಶಾಂತಿಯ ಕಲೆಗೆ
ದಾನವ್ಯತೆಯ ಬಲಿಗೆ ಸಂದ ಸಾತ್ವಿಕನಾಗಿ
ಬರುವನೇನೋ ಅಹಾ! ಬಂದನೇನೋ ಅಹಾ!
ನಿದ್ದೆಯಲಿ ಸದ್ದಾಯ್ತು ಮೂರುಗುಂಡಿನ ಸದ್ದು!

ಬೆದರಿ ಬೆಚ್ಚರಬಿದ್ದು ಮೇಲೆದ್ದು ನೋಡಿದೆನು
ಹಾ ರಾಮ! ಆ ದಯಾಮೂರ್ತಿ ಕೆಡೆದಿತ್ತಲ್ಲಿ!
ಜೀವಕೋಟಿಯ ಪಾಪಭಾರವನು ಸಹಿಸಿದಾ
ಸಹನೆ ಕಂಡಿತ್ತಲ್ಲಿ!
ಜಗವನೇ ಕವಿದಿತ್ತು
ಮಾನವ್ಯದಪಮಾನ! ದೈನ್ಯದುರ್ದಶೆಯ ಕಣ್
ಕತ್ತಲೆಯ ಕಲ್ಪಾಂತದಸಹಾಯ ಮೌನ!

೨೪—೧೧—೧೯೪೪

---

## ಕವಿ ಕೋಗಿಲೆ

### ೧

ವೃಂದಾವನದಲಿ ಕೋಗಿಲೆ ಕೂಗಿದೆ
ಕುಹೂ ಕುಹೂ ಕರೆದು
ಮಂಜುಳನಾದ ನಿವೇದನೆಯಲಿ ಕಣ್
ಮುಗಿದಿದೆ ಮೈಮರೆದು

ನಿಯತಿಯ ಮೊದಲಿನ ನಗೆನೋಟದ ನಸು
ಕೊಪ್ಪಿದೆ ಬಾಂದಳದೆ
ವಿಯತಿಯ ವರ್ಣ ವಿಕಾಸದ ಕಲ್ಪನೆ
ಕೆದರಿದೆ ಭೂತಳದೆ

ಆರಡಿಗಳ ಗಂಭೀರ ವಿವೇಚನೆ
ತೊಡಗಿದೆ ಹೂಗಳಲಿ
ಸಾರಸಗಳ ಹೃತ್ಸಾರದ ಮಿಡಿತಕೆ
ಸುಳಿದಿದೆ ತಂಗಾಳಿ

ಬೆಳ ಬೆಳಕಿನ ಭವ್ಯಾಂಗಣದಲಿ ಕುಣಿ
ಕುಣಿದಿದೆ ಭಾವಸಿರಿ
ಬದುಕಿನ ಹೃದಯದೆ ಹರಿಹರಿದಿದೆ ಹೊಸ
ಹುಮ್ಮಿನ ಮಧುರ ಝುರಿ !

೨

ಕಾಡಿನ ಕೊನೆಯಲಿ ಕೋಗಿಲೆ ಕೂಗಿದೆ
ಕುಹೂ ಕುಹೂ ಕರೆದು
ಗೂಡಿನ ಬಾಗಿಲ ಮರೆಯಲಿ ಮೆಲ್ದನಿ
ಹೊಮ್ಮಿಸಿ ಬಾಯ್ದೆರೆದು
ನಿದ್ದೆಯ ಕಂಗಳನರಳಿಸಿ ಜಾಡ್ಯವ
ನೊದ್ದಿದೆ ಜನಜನತೆ
ಸದ್ದೊದಗಿದ ಬ್ರಹ್ಮಾಂಡದ ಮನೆಯಲಿ
ತೊಡಗಿದೆ ನಿತ್ಯಕಥೆ
ಎದ್ದಿತು ಮಗು---ಮತ್ತೆದ್ದಳು ಭಾಮಿನಿ
ಮುಗಿಯದ ಮನೆಗೆಲಸ
ನೀರಿನ ಬಿಂದಿಗೆ ಹಾಲಿನ ತಂಬಿಗೆ
ತುಂಬಿದೆ ದನ—ದವಸ
ನೇಗಿಲಯೋಗಿಯೊ ಕರ್ಮದ ಚಾಗಿಯೊ
ಭೋಗಿಯೊ ಯಾರೇನು?
ತ್ಯಾಗದ ವಿಶ್ವದ ನಿಯಮಕೆ ಕೆಚ್ಚಲು
ತುಂಬಿದೆ ಸುರಧೇನು !

೩

ಏತಕೊ ಏನೋ ಕೋಗಿಲೆ ಕೂಗಿದೆ
ಕುಹೂ ಕುಹೂ ಕರೆದು

ಸುಖದುಃಖಕೆ ಸೆರೆಸಿಲುಕದ ನೆಮ್ಮದಿ
ಯುಸಿರನು ಸೆಳೆಸೆಳೆದು

ಮುಗು ಮುರುಗಿದೆ—ಬಾನಟ್ಟವೆ ಬಿರಿದಿದೆ
ನಡೆದಿದೆ ಭೂಕಂಪ
ನೀರಿನ ಕೊಡ ಕೈ ಜಾರಿದೆ ಭಾಮಿನಿ
ಬಿಸುಸುಯ್ದಳು ಪಾಪ!

ಬಯಲಿನ ಬಳಿಯಲಿ ನೇಗಿಲ ಯೋಗಿಯು
ಹೊಸೆದನು ಹೊಸರಾಗ
ತಾನೇ ಹಾಡುವ ತಾನೇ ಮೆಚ್ಚುವ
ಮಾನಸದಾವೇಗ

ಭೋಗಿಯು ಹಾಸುಗೆ ಬಿಟ್ಟೇಳದೆ ಹೊರ
ಹೊರಳಿದನತ್ತಿತ್ತ
ಕೆಲದರಸಿಯ ಕೈ ಕಿಣಿ ಕಿಣಿ ಬಳೆಗಳ
ಕ್ವಣಿತವನಾಲಿಸುತ

೪

ಮತ್ತೂ ಮತ್ತೂ ಕೋಗಿಲೆ ಕೂಗಿದೆ
ಕುಹೂ ಕುಹೂ ಕರೆದು
ಮಾಣದ ಮನಸಿನ ಕಡು ಸಂತಸದಲಿ
ಗೆಲವಿನ ಜೇನ್ ಸುರಿದು

ಗೋವಳನೊಬ್ಬನು ಕೈಗೊಳಲೂದುತ
ಬಂದಿಹನತ್ತಕಡೆ
ಗೋದೂ—ಕಪಿಲೇ—ಗೌರೀ—ಮೈರೇ
ಮಂಗಳೆಯರ ಕೂಡೆ

ದಿನ ಮೊದಲಿನ ಮಂದಾರಕೆ ಹಾರುವ
ಪಾತರವವನ ಬಗೆ
ಹಚ್ಚನೆ ಬೆಟ್ಟದ ತುದಿಯಲಿ ತೊಳಲುವ
ಮಿಗಗಳು ಹೋಲಿಕೆಗೆ

ಹೊಸ ಬುಗ್ಗೆಯ ಕಾಳ್ಪುರಗಳ ತಿಳಿತನ
ವೈಗೂಡಿಹುದೇನು!
ನಡೆ ನುಡಿಯಲಿ ನಿಷ್ಕಾಮದ ಸಹನೆಯ
ತೃಪ್ತಿಯ ಸವಿಜೇನು!

೫

ಮತ್ತೂ ಕೂಗಿಹುದಾಮುರಿಕೋಗಿಲೆ
ಕುಹೂ ಕುಹೂ ಕರೆದು
ಸುತ್ತಲು ಹರಡಿದ ಬೆಳ್ಬೆಳಕಿಲಿ ನವ
ಚೈತನ್ಯವನೆರೆದು

ಗೋವಳನಚ್ಚರಿಗೊಂಡನು. ಏನಿದು
ಕಾಡಿನ ನುಡಿಗಟ್ಟು!
ಹೊನಲಿನ ಪರಿಯೋ—ಗಾಳಿಯ ಕರೆಯೋ
ತುಂಬಿಯ ಮನದದಟು!

ಆ ಕಡೆ ಕಂಡನು ತುರು ಮಂದೆಯು ಕಾಲ್
ಚಾಚಿದೆ ಬಾಯ್ಕಡೆದು
ಈ ಕಡೆ ಕಮರಿಯಲೊಂದೇ ನಾದವು
ತುಂಬಿದೆ ಸೆಲೆ ಹೊಡೆದು

ಬಳುಕುವ ಬಳ್ಳಿಯ ತೂಗುವ ತೊಂಗಲ
ಹೂವಿಗು ಇದು ಮಧುರ!

ಕೇಳುವ ಕೇಳದ ಪಿಸು ಮಾತಿನ ಗೆಳ—
ತನದೀ ಸತ್ಕಾರ!

೬

ಬನದಾಡಿಯೊಳಾ ಕೋಗಿಲೆ ಕೂಗಿದೆ
ಕುಹೂ ಕುಹೂ ಕರೆದು
ನನೆದುದಿಯಲಿ ನಲಿದಾಡುವ ಕಿರಣದ
ಕೋಮಲ ಕರವಿಡಿದು

ಕಣ್ ಕಣ್ಣೂಡಿಸಿ—ಎದೆಯೆದೆಯಾನಿಸಿ
ಕೇಳಿದನಾತವಸಿ
ಸೊಗಸನು ಕಂಡು ಸಮಾಹವನರಿವಾ—
ತ್ಮೋನ್ನತಿಯ ರಸರ್ಷಿ!

ತುರುಗಳ್ ಮರೆತನು—ಬೆಟ್ಟವ ಮರೆತನು
ಸುತ್ತಲ ಕಾಳ್ಕಣಿವೆ
ತಪ್ಪಲ ಮರೆತನು—ತನ್ನನೆ ಮರೆತನು
ತೆರೆಯಿತು ಬದುಕಿನೆವೆ!

ಮನಸೆಂಬುದು ಮಲರಿನ ಮಿದು ತೋಟಿಯು
ಮುಚ್ಚಿದ ಬಾಳಿಸಳು
ಎಸಳೆಸಳಿನ ಕಣ್ ತೆರೆಯಿಸಿ ಕಾಣುವ
ಹೊಸ ನೋಟದ ಸೂಳು!

೭

ಕ್ಷಣಕಾಲವು ಕಳೆಯಲು ಕಿರುಗೊಳಲನು
ಕೈಗೊಂಡನು ಗೊಲ್ಲ
ಕುಹೂ ಕುಹೂ ಮೃದುನಾದದ ಮೈನವಿ—
ರೆದ್ದಿತು ಜಗವೆಲ್ಲ!

ಬಯಲಿನ ಕಳವೆಯ ತುದಿಯಲಿ ಕಂಡಿಹ
ಹನಿಗಳ ಬಾಸಣಿಸಿ
ಬೆಟ್ಟದ ಬಂಡೆಯ ಬದಿಯಲಿ ತಳುಹಿದ
ಮುಗಿಲನು ನೇವರಿಸಿ

ಬಳ್ಳಿಯೊಳಾಡಿತು—ಪೊದರೊಳು ನುಸುಳಿತು
ಕಮರಿಯ ಕೆಳಗಿಳಿದು
ಹಳ್ಳದೊಳದ್ದಿತು—ಮರುಮೇಲೆದ್ದಿತು
ಕೊನೆಕಿಬ್ಬದಿ ಕೊರೆದು!

ತುಂಬಿತು ತಳುಕಿತು ತಾನೇ ತೊದಲುವ
ಬೈಗಿನ ಮೆಲುಪಾಡು
ಆಗಸ ತಿರೆ ಪಾತಾಳಗಳೆಲ್ಲವು
ಜೇನಿನ ಹೊಸಗೂಡು!

೮

ವೃಂದಾವನದಲಿ ಕೋಗಿಲೆ ಕೂಗಿದೆ
ಕುಹೂ ಕುಹೂ ಕರೆದು
ನಾಡಿನ ಮೈಮೆಯ ಮಂಗಳ ಗೀತಕೆ
ಹೊಸ ಜೀವನವೆರೆದು

ಊದುವ ಕೊಳಲಲಿ ದನಿ ಮೇಳೈಸಿತು
ಕಳೆದಿದೆ ಕಾಮುಕತೆ
ಮೆಲು ಮೆಲುಪಾಗಿಸಿ ಹೃದಯವೆ ಹಾಡಿದ
ಮೌನದ ಮೃದು ಮಮತೆ!

ಒಂದೇ ಬೀಣೆಯ ತಂತಿಯ ಮಿಡುಕಿಸಿ
ಕಂಡಿತು ಸುಖ ಬೋಧೆ

ಒಂದೇ ಬಿದಿರಿನ ಗಿಣ್ಣನು ತುಡುಕಿಸಿ
ರತಿಯೂದಿದ ಸೇದೆ !

ಇದನೆರಡೆಂಬಿರೆ?—ಒಂದೇ ದೇಹದ
ತುಂಬಿದ ಸಾಕಲ್ಯ !
ಕೃತಿ ಮತಿ ರುತಿಯಲಿ ರಸದೇಕಾಂತದ
ಕಲ್ಪದ ಕೈವಲ್ಯ !

೯—೨—೧೯೪೯

## ಮನಸು ಮಲ್ಲಿಗೆ

ತನ್ನ ಮನಸಿನ ಹೂವು ಮಲ್ಲಿಗೆಯ ಮುಗುಳಾಗಿ
ಸೌಸವದ ಸಿರಿಸೂಸಲರಳಬೇಕು
ತನ್ನ ಕಲ್ಪನೆಯ ಹೂದೋಟದಲಿ ನಗೆದುಂಬಿ
ನಲುಮೆ ನಿಚ್ಚಳವಾಗಿ ಹಾಡಬೇಕು

ಬದುಕು ಮುಂಬೆಳಕಾಗಿ ಜೀವಜಾಗೃತವಾಗಿ
ಸುಪ್ತ ಚೇತದ ನಾದ ತುಂಬಬೇಕು
ಸೊಗಸು ಕಾಣುವ ನೋಟ ನಿತ್ಯವೂ ನೆಲೆಯಾಗಿ
ಜಗವೆ ದೈವತವೆಂದು ನಂಬಬೇಕು

ಪುಣ್ಯಪ್ರಣಾಲಿಯ ಪವಿತ್ರತಮ ವೇದಿಕೆಯ
ಸುತ್ತಲೂ ಸೇವೆಯೇ ಚಿಮ್ಮಬೇಕು
ಸತ್ಯವೇ ಸುಖವಾಗಿ ಶಾಂತದಿಗ್ವಿಜಯದಲಿ
ಕರುಣೆ ಕಹಳೆಯನೂದಿ ನೆಮ್ಮಬೇಕು

ತಾನೆಂದ ಮಾತು ಬ್ರಹ್ಮಾನಂದವಾಗಲಿಕೆ
ತನ್ನನೇ ತಾನರಿತು ನೋಡಬೇಕು

ಸಾನಂದ ಸಾಗರದ ತೆರೆಯ ತೆಪ್ಪವನೇರಿ
ತನ್ನತನವನು ಜಗಕೆ ನೀಡಬೇಕು !

೨೪—೨—೧೯೪೯

## ಆಶೋತ್ತರ

೧

ಇಷ್ಟು ಹೊತ್ತಿನ ಮೇಲೆ ಬಂದು ಫಲವೇನುಂಟು
ಬಾಗಲಿಕ್ಕಿದ ಬೀಗ ತೆರೆಯದಯ್ಯ
ಇಷ್ಟು ದಿನಗಳ ಮೇಲೆ ಕೂಗಿಕರೆದೇನು ಫಲ?
ಕಿವಿಯ ಗವಿಯಲಿ ಸಪ್ಪು ಸುಳಿಯದಯ್ಯ

ಇಷ್ಟು ದಿನಗಳ ತನಕ ಕಾದ ಕಾವಲಿಯತ್ತ
ತಣ್ಣೀರು ಸೂಸಿದರೆ ಸಿಡಿಯಲುಂಟು
ಇಷ್ಟು ತೈಲವನುರಿಸಿ ಸುಟ್ಟ ಸೊಡರಿನ ಸುತ್ತ
ತಂಗಾಳಿ ಬೀಸಿದರೆ ಮಡಿಯಲುಂಟು

ಹಸಿ ಹಸಿದು ತನ್ನನೇ ತಾನುಂಡು ತಣಿದಾಗ
ಸೊದೆಯುಣಿಸಲೆಂದಾರು ಬಂದರೇನು?
ಹುಸಿ ಬಯಕೆ ಹುಚ್ಚಾಗಿ ಮುಂಕು ಕವಿದಾಗ ದೇ-
ವಾಂಗನೆಯೆ ಮುಂದೊದಗಿ ನಿಂದರೇನು?

ಕಣ್ಣೀರ ಧಾರೆಯಲಿ ಭಾಂಡ ಬರಿದಾದಾಗ
ಮುಗಿದ ಮಾಂಗಲ್ಯದಭಿಮಾನವೇಕೆ?
ಮುನ್ನೀರ ತುಮುಲಿನಲಿ ಹಡಗು ಮುಳುಗಿದ ಮೇಲೆ
ಮತ್ತೆ ಮುಂಬೆಳಕು ಮೂಡಿರಲು ಬೇಕೆ?

೨

ಆ ದಿವಸವೊಂದಿತ್ತು ಕಾಣದೆಣಿಕೆಗೆ ಸೋಂತು
ಕನಸು ಕಟ್ಟೆಳಿಗೊಂಡ ರಾಜ್ಯ ಭರಣ
ಆ ಗಳಿಗೆಯೊಂದಿತ್ತು ಬಯಕೆ ಗರಿಗಳನೆತ್ತಿ
ಭಾವ ಬ್ರಹ್ಮಾಂಡದಲಿ ಸುಳಿದ ಹರಣ

ಎಂದೊ ತೀಡುವ ಗಾಳಿಗಾಗಿ ನೇಣ್ಬಿಗಿದು ಪಟ
ವಿರಿಸಿ ನಾಲ್ದೆಸೆ ನೋಡುತಿದ್ದ ಸಹನೆ
ಎಂದೊ ಮೂಡುವ ಮೊಳಕೆಗಾಗಿ ಬೇಸಗೆಯೆಲ್ಲ
ಬೆಂದು ಬೆಂಡಾಗಿ ತಪಗೊಂಡ ಬವಣೆ

ಸತ್ಯ ಸಂಗಮಕಾಗಿ ನಿತ್ಯಜಾಗರಣೆಯಲಿ
ಬೆರಳೆಣಿಕೆಗಳಲೆ ಅಸುವಿಡಿದ ಸಮಯ
ಎತ್ತಲೋ ಜಿನುಗುತಿಹ ಸಿರಿಸೋನೆಗಾಗಿ ಮರು
ಭೂಮಿಯಲಿ ಬಾಯ್ದೆರೆದು ಕಾದ ಹೃದಯ

ಉಸಿರ ಬಿರುಗಾಳಿ ಕಣ್ಣೀರ ಪುಷ್ಕರ ಧಾರೆ
ಎದೆಯ ಭೂಕಂಪ ತೊಡ ತೊಡಗಿತೇನು !
ಭಾವಗಳ ತುಮುಲಿನಲಿ ಕಾಮು ಕಲ್ಪಾಂತದಲಿ
ವಟಪತ್ರವೇರಿ ಬಾಳ್ದುಳಿವೆನೇನು !

೩

ಆ ದಿವಸವಿನ್ನೆಲ್ಲಿ? ಇಂದು ಗೈಮೆಯ ಗುಡಿಯ
ಗೋಪುರಕೆ ದೂರದಲೆ ಕೈಮುಗಿವೆನು
ಭಾವುಕರ ಗಾವಳಿಯ ತೊತ್ತಳದ ತಲೆಮರೆಸಿ
ಕಲ್ಪದಾ ತೀರದಲಿ ತೊಳಲಿರುವೆನು

ಇಂದು ಹಿಡಿದಿಹ ದೀಪ ನಿನ್ನ ಮನ್ನಣೆಗಲ್ಲ
ಗುಟುಕು ಜೀವದ ಪಯಣಕುಳಿದ ಬತ್ತಿ

ಹಲವು ಕಡಲಳಿದ ನಾವಿಕನೊಬ್ಬನಂತದಲಿ
ಎಲೆಯ ದೋಣಿಯಿನಾಡುತಿರುವ ವೃತ್ತಿ !

ಬಯಕೆ ಕುಸುರನು ಕೆತ್ತಿ ಕುಂದಣವನಿಟ್ಟು ಜೇಂ—
ಗೂಡಿನೊಳಗೇಸುದಿನ ಕಾಯಬಹುದು ?
ಗೈಮೆವ್ಯೆಮೆಯ ತಂತುಗಳನು ಹರಡಿದ ಜೇಡ—
ನೆನಿತು ದಿನ ಬಲೆಯಿರಿಸಿ ನೋಯಬಹುದು ?

ತಾನೆ ಜೇನನು ಕುಡಿದು ತಾನೆ ಬಲೆಯನು ಹೊಸೆದು
ತನ್ನೊಳೇ ತನ್ನತನ ಬತ್ತಿರುವುದು
ಆಶೆಯವರೋಘದಲಿ ರತಿಯ ವೈಕಲ್ಯದಲಿ
ಶೂನ್ಯ ಶೃಂಗಾರದಲಿ ಸತ್ತಿರುವುದು !

೪

ಇಷ್ಟು ಹೊತ್ತಿನ ಮೇಲೆ ಬಂದು ಫಲವೇನು? ಹಸಿ—
ದತಿಥಿಗಿಂದೇನು ಕೊಡಲುಂಟು ಸನಿಹ
ಇಷ್ಟು ದಿನಗಳ ಮೇಲೆ ಬದುಕು ಬತ್ತಿರುವಾಗ
ಯಾವ ಸುಖ ಚಿಮ್ಮಲಿದೆ? ಬರಿದು ಗೇಹ !

ಜನ್ಮಕೂ ಮರಣಕೂ ಸೂತ್ರ ಬಂಧವನಿರಿಸಿ
ಮಧ್ಯದಲಿ ಕಟ್ಟಿಹುದು ಜೀವರಂಗ
ಬಾಳು ಬಯಲಾಸೆಗೊಂಡತ್ತ ಜಗುಳಿದ ಮೇಲೆ
ಯಾರು ಕುಣಿದೇನು? ಅದು ಶೀಲ ಭಂಗ!

ಕಡಿದ ತಂತಿಯ ಮೇಲೆ ಬೆರಳನಾಡಿಸಬೇಡ
ಅದು ಮೃತ್ಯುಮಂದಿರದ ಮೌನ ಕಾಲ
ಹರಿದ ಹಾಳೆಯ ಮೇಲೆ ಬಣ್ಣ ಬೆರೆಸಲು ಬೇಡ
ಅದುರಾಗ ವೈರಾಗ್ಯದಂತರಾಲ

ಆವನೋಟವನಿತ್ತೆನದಕಾಗಿ ಸನ್ಮಾನ
ವೆಸಗದಿರು ಹೊಗಳಿಕೆಯ ಹೂಮಳೆಯಲಿ!
ಆವ ಗೆಳೆತನಕತ್ತೆನಡು ಮರವು ಮುಸುಕಿನಲಿ
ಸುಪ್ತ ಚೈತನ್ಯದಲಿ ಲೀನವಿರಲಿ!

೧೩—೭—೧೯೪೯

---

## ಶ್ರಾವಣ ಸಂಗೀತ

೧

ಎನ್ನ ಮನೋಮಂದಿರಕೆ—ಕರೆದೊಯ್ವೆನು ಬಾ
ಸನ್ನುತ ಸುಖ ಸುರಲೋಕಕೆ ಸೆಳೆದೊಯ್ವೆನು ಬಾ
ಕಣ್ ಕುಣಿತದ ಕುಡಿನೋಟದ ಕಲ್ಪನೆಗಳನೈಸಿ
ನಗೆ ನುಣುಪಿನ ಚೆಲುಗದಪಿನ ಸನ್ಮಾನವನುಣಿಸಿ
ಆ ಕನಸಿನ ಕೈವಲ್ಯಕೆ ಕರೆದೊಯ್ವೆನು ಬಾ
ಆ ಹರಯದ ಹೊನ್ನೂರಿಗೆ ಸೆಳೆದೊಯ್ವೆನು ಬಾ!

೨

ಕಳೆಯಿತು ಕಾವ್ ಮುಗಿಲೆದ್ದಿತು ಹನಿಹನಿಗಳ ಸೂಸಿ
ತಿಳಿನೀರಿನ ಸುಳಿಸೋಂಕಿನ ಚೆಲು ತುಂಬಿತು ಸರಸಿ
ಸೆಳೆಮಿಂಚಿನ ಸೋಪಾನದ ಸಿರಿಹಂತವನೈದಿ
ಮಳೆಗಾಲದ ಕರೆ ಕೇಗಿತು ಮೊಳಗಿತು ಸಹ್ಯಾದ್ರಿ!

೩

ಬೇಸಗೆ ಹಿಮ್ಮೆಟ್ಟಿತು ತಲೆಯೆತ್ತಿತು ನೀರ್ಬಾಳೆ
ಆಷಾಢದ ಪರಿರಂಭಕೆ ಸುಗಿದಳು ಭೂತರಳೆ!
ಬೇಸರದಲಿ ಯುವ ಪಥಿಕರ ಹೃತ್ಕಾಮನೆಯರಳೆ
ಮೋಸದ ಕಣ್ಮುಟುಕಿದಳಾ ಕಾರ್ಗಾಲದ ಸೂಳೆ!

೪

ಮಾಸಿದ ಮೈ ಸೂಸುವ ಕಣ್ಣೀರಿನ ಕೆಂಗದಪು
ಆಸೆಯ ಕಡೆ ನೀಳ್ಕರಿಸುವ ನಿಟ್ಟುಸಿರಿನ ನೋಂಪು
ದೂಸರದಲಿ ಕೊನೆಗೆದರಿದ ಕೂದಲ ಕಾರುಣ್ಯ
ಮೂಸೆಗೆ ಹೊಯ್ದಿದೆಯುರಿಯಲಿ ಕರಗಿತು ತಾರುಣ್ಯ!

೫

ಮಾತಾಡದ ಮುನ್ನೋಡದ ವಿರಹದ ಪರಿಪಾಠ
ಓತೆಂತುಟೊ ಬರಿಬದುಕುವ ಭಾವನೆಯೊಳನೋಟ
ಪ್ರೀತಿಯ ಪುಣ್ಯಾಂಗಣದಲಿ ತಪಗೊಂಡಳನಾಥೆ
ಕಾತರದಲಿ ಕಂಗೆಟ್ಟಳು ಸಂಸಾರದ ಸೀತೆ!

೬

ದಿನವೆಲ್ಲವು ನಡೆದಿದ್ದಿತು ಘನಘಟೆಗಳ ದಾಳಿ
ಬಾನ್ ಬಯಲಲಿ ಗಿರಿದರಿಯಲಿ ಬೆನ್ನಟ್ಟಿತು ಗಾಳಿ
ಸುರಿಸುರಿದೋ ಹರಿಹರಿದೋ ಕಳೆಯಿತು ಮಳೆಗಾಲ
ನೆರೆದಿದೆ ಸುಶ್ರಾವಣ—ಹಿತ ಶೀತಲ ಸುಖಶೀಲ!

೭

ಹೊಸಬೆಳಕಿನ ಕೆಂದಾವರೆ ನಸುನಕ್ಕಿದೆ ನೋಡು
ದೆಸೆಯೆಲ್ಲವು ಪೀತಾಂಬರ ಹೊಸೆದಿಹ ನಲ್‌ಬೀಡು
ಬಸವಳಿದ ದಿನಾಂತರದಲಿ ಹಕ್ಕಿಯ ಮೆಲು ಪಾಡು
ಹಸನಾಗಿದೆ ಹೂಗುಡಿಯಲಿ ಸೆಲೆಗೊಂಡಿದೆ ಕಾಡು!

೮

ಚೈತನ್ಯದ ತೆರೆಹೊಯ್ದಿದೆ ತಾರುಣ್ಯದ ಶರಧಿ
ಸೌಜನ್ಯದ ತಡಿವರಿದಿದೆ ಮಾನಸ ವಿರಹಾಧಿ

ಸುಖದುಃಖಕೆ ಸೋಲ್ಗೆಲವಿಗೆ ನೆರೆ ನಿನ್ನದೆ ಕೆಳದಿ
ಲೋಕಾಂತಕೆ ನಡೆಮುಂದಕೆ ಇದು ಬದುಕಿನ ಹಾದಿ!

೯

ನೋಟದನಗೆ ನಗೆಯೊಪ್ಪಿಗೆ ಒಪ್ಪಿತದನುರಾಗ
ಬೇಟದಬಗೆ ಯೆಣೆಯಾಟದ ಹುಮ್ಮಸದಾವೇಗ
ಬೇಕೆಂಬ ಮನೋಗತಿಯಲಿ ಗರಿಗೊಂಡಿದೆ ಗೈಮೆ
ಆಕಾಶಕೆ ನಿಚ್ಚಣಿಕೆಯ ನಿಡುವೆಣಿಕೆಯ ಹಿರಿಮೆ

೧೦

ಈ ಸಂಗದ ಮಧು ಮಹಿಮೆಯ ನೇನೆಂಬೆನು ಜಾಣೆ!
ಇದರೂಟವನೆನಿತುಂಡರು ಸಾಕೆಂಬರ ಕಾಣೆ!
ಬರಿಗೈಯಲಿ ಬಂದಿರುವೆನು ಬೇಡಲು ನಿನ್ನಾಣೆ—
ಸಿರಿಸಿಂಗರದೇಕಾಂತಕೆ ಬಾ—ಭಾಗ್ಯದ ಶರಣೆ!

೧೧

ಮೆಲ್ಲನೆ ಮುತ್ತಿಡುವೆನು ಬಗೆ ಮಿಗಬೆದರದ ರೀತಿ
ಚೆಲ್ಲದೆ ಮಿಡಿಮಿಡಿವೆನು ಬಾಳ್ ಬೀಣೆಯ ನಡುತಂತಿ
ಮಲ್ಲಿಗೆ ಮೊಲೆಯಂತರದಲೆ ಸುಳಿದಿರುವೀ ಪ್ರೀತಿ
ಮೊಲ್ಲೆಯ ಮಧುಪೂರದೆ ಗುಂಜಾಡುವ ಗುಣಗೀತಿ!

೧೨

ರತಿ ಕಾಮರು ಬಂದಿರುವರು ಹಸೆಮಣೆಯನು ತಾರೆ!
ಹೊಸ ಹುರುಪಿನ ಬಿಸಿರಕುತದ ಸುರಿ ಮಂಗಳ ಧಾರೆ!
ಅಸು ನಿಮಿರಿದೆ ಮೈ ಬೆಮರಿದೆ ನಡುಗಿದೆ ಕೈಕಾಲು
ಉಸಿರುಸಿರಿನ ಕಮ್ಮನೆಯಲಿ ಹೂತಿದೆ ಹೆಂಗರುಳು

೧೩

ನೀಳ್ನೋಟದ ನೇಹೆಳೆತಕೆ ಸಿಲುಕಿತು ಹೂಹರಣ
ತೋಳ್ಬಿಗಿತದ ಸೆರೆಮನೆಯನು ಸೇರಿತು ಮೃದುಚರಣ
ಬಾಳದಟನ ಕಲ್ಕರಗಿತು ಮುದಿತಾಂತಃಕರಣ
ಹೊಸ ಕಾಣ್ಕೆಯ ಹೊಸ ಪೂಣ್ಕೆಯ ಸೊಗಸಿನ ಸಂಧಾನ!

೧೪

ತೋಳಿಗೆ ತೋಳ್–ಬಾಳಿಗೆ ಬಾಳ್ ಭಾವನೆಯನುಸಾರ
ರಸ ಜಗತಿಯ ಸಾಫಲ್ಯದ ಸುಂದರ ಸಹಕಾರ
ಬಿಗಿಬವಣೆಯ ಕಣ್ಕವಣೆಯ ನೋವಿನ ಸುಖ ಸಮರ
ಅನುದಿನವೂ ಮನ ಮೆಚ್ಚುವ ಮಂಜುಳ ಮಧು ಮಧುರ!

೧೫

ಏಂಗಂಡೆನೊ ಕಣ್ಣಿನ ಕೊನೆ ಕನವರಿಸುವ ಸೊತ್ತು
ಏನುಂಡೆನೊ ತೆಳು ಚೆಂದುಟಿ ಚಪ್ಪರಿಸುವ ತುತ್ತು!
ಮೈಕುಣಿತಕೆ ಮಣಿರಣಿತಕೆ ಸುರಿಸಾಸಿರ ಮುತ್ತು!
ಮೃದು ಮಮತೆಯ ಸಮಸಮತೆಯ ವಿನಿಮಯದ ಮಹತ್ತು!

೧೬

ಸುರನಂದನ ಕೇಳೀವನ ಕಲ್ಪದ್ರುಮವೇಕೆ?
ಚಿರವಾಂಛಿತ ಚಿಂತಾಮಣಿ ಮಂದಾರವು ಬೇಕೆ?
ನೀನಿರೆ ಸಮ್ಮೋಹದ ಸುರೆ ಕಟ್ಟಡವಿಯು ಚೆನ್ನ
ನೀಬರೆ ಸಂಸಾರದ ಬರೆಗೇಹವು ಸಂಪನ್ನ!

೧೭

ಪಿಸುಮಾತಿನ ರಸಧುನಿಯಲಿ ಸಿಡಿದಿದೆ ಸುಖಲಹರಿ
ಗುರುಕುಚಗಳ ಗರುವಿಕೆಯಲಿ ಹೊಡೆದಿದೆ ಜಯಭೇರಿ!
ಅಳು ಮನಸಿನ ಹುಲು ಮನುಜನೆ ಕಂಗೆಡದಿರು ಬೆದರಿ
ಕೊಳುಗುಳದಲಿ ಮುಂಗೊಳುವುದೆ ಗೆಲವಿನ ಹೆದ್ದಾರಿ!

೧೮

ನಗುವೆವು ಮತ್ತಳುವೆವು ಇದುಲೋಕದ ಸಮಪಾಕ
ಅಳುನಗೆಯಲಿ ಕೊಳಲಿರುವುದೆ ಮಮತೆಯ ಮೃದ್ವೀಕ!
ತುಟಿತುಟಿಗಳ ಸಂಪುಟದಲಿ ಪುಟದಿದೆ ರತಿಲೋಕ
ಕಾದಲ್ಮೆಯ ಕುಣಿತಕೆ ಕೈಗೆಟಕಿರುವುದು ನಾಕ!

೧೯

ಭೂಲೋಕದ ಬೆಸನಕೆ ಬಂದೊದಗಿರುವಳು ಗಂಗೆ
ಶೃಂಗಾರದ ಸುಖ ಸುರತ ಪ್ರಣಯೋಚ್ಚತರಂಗೆ!
ಹೂಗಂಗಳ ಬೆಳ್ದಿಂಗಳ ನಗೆಸಿಚ್ಚುಟದೊಸಗೆ
ಬಾ—ಮುದ್ದು ಮನೋರಮೆ! ಮೃದು ಸಂಗೀತದ ಹಾಗೆ!

೨೦

ಎನ್ನಮನೋಮಂದಿರಕೆ—ಕರೆದೊಯ್ವೆನು ಬಾ!
ಉನ್ನತ ಸುಖ ಸಂಸಾರಕೆ ಸೆಳೆದೊಯ್ವೆನು ಬಾ!
ಮಮತೆಯ ಮಧು ಕೋಕಿಲೆಗಳ ಗಾನಾಮೃತವೈಸಿ
ಭವದಾಸೆಯ ಭವಿತವ್ಯದ ಬಾವನ್ನವ ಸುರಿಸಿ—

ಆ ತರುಣ ತಪೋವನಕೆ—ಕರೆದೊಯ್ವೆನು ಬಾ!
ಆ ರಾಗದ ರಸನಿಮಿಷಕೆ ಸೆಳೆದೊಯ್ವೆನು ಬಾ!

೯—೨—೧೯೩೦

---

## ಗೋಮಟ ಶತಕ

ಏನಿದದ್ಭುತರೂಪ ನಿಂದಿದೆ ಭಯಾಕಾರ!
ಯಾವ ತಾಪಸನಿವನು? ಏನು ಕರ್ಮದ ಫಲವ
ನುಣಲೆಂದು ನಿಂದಿಹನು ಮಳೆಗಾಳಿ ಬಿಸಿಲೆಂಬ
ಭೌತಿಕತ್ರಯಕಳುಕದೆದೆಯೊಡ್ಡಿ ಕಾದಕಲ್

ಕಾವಲಿಯ ಮೇಲಿಲ್ಲಿ— ನಿರ್ವಾಣರೂಪದಲಿ !
ತನ್ನನೆಲ್ಲರು ಕಂಡು ತಾನಾರನೂ ಕುರಿತು
ಕಾಣದಿಹ ಗಾಂಭೀರ್ಯದರ್ಪದಲಿ ಕಣ್ಬಿಟ್ಟು
ಸರ್ವವನು ತಿಳಿವ ತಳತಂತ್ರದಲಿ ಕಾದಿರುವ
ನಾವರಾಯನ ಬೇಹುಗಾರನೀತನೊ! ದೃಪ್ತ
ಭೀಮ ಸುಂದರನೊಬ್ಬನಾಜಾನುಬಾಹು ಬಲ
ಭದ್ರಭುಜ ಬಲನೆನಿಸಿ ಕೈ ಕಲೆತು ಕಾದಿ ಮೈ
ಸೋತು ನಿಂದಿಹನೇನು? ತಲೆಯೆತ್ತಿ ಮುಂದೆಸೆವ
ಕೋಡುಗಲ್ಗಳಕಂಡು ಕನಲಿ ವಪ್ರಕ್ರೀಡೆ
ಗೆಣಿಸಿ ಸೊಂಡಿಲ ತೂಗಿ ನಿಂತಸಾಧಾರಣದ
ಮತ್ತವಾರಣವೇನು? ಈ ತೀರ ಸರಸಿಯಲಿ
ಬೆಳೆದ ಸೌಗಂಧಿಕೆಯನಾಯ್ದುಕೊಳುವಾತುರದ
ಗಂಧಮಾದನವೇರಿ ಬಂದ ಭೀಮನೊ? ವಿರಹ
ದುರ್ವಾರ್ಯದೀನತೆಯ ದುಃಖದಲಿ ಮೈಮರೆತು
ಪಂಪಾನುಕೂಲದಲಿ ನಿಂತು ಕೋರಕಕುಚದ
ಕಾಮಿನಿಯ ಫುಲ್ಲನೇತ್ರದ ಕುಸುಮಗಂಧಿನಿಯ
ಕಾಂಬ ಕಾರುಣ್ಯಾಭಿರಾಮನೋ ರಾಮನೊ?
ಈ ವಿಶ್ವ ವೈಚಿತ್ರವನು ಕಂಡು ಬೆಕ್ಕಸಂ
ಬಟ್ಟು ಬ್ರಹ್ಮಾಂಡದಲಿ ತಲೆಮರಸು ತತ್ವಗಳ
ಬಿಡದೆ ಬೆನ್ನಟ್ಟುವಾನ್ವೀಕ್ಷಿಕಿಯೊ? ಶಾಪದಲಿ
ಕಲ್ಲಾಗಿ ಬಿದ್ದಹಲ್ಯೆಯ ದುರಿತ ಮೋಚನೆಗೆ
ಕುರುಹಿಟ್ಟ ಪಾಪಪೌರುಷದ ಮಾಸತಿಗಲ್ಲೊ?
ಯೋಗ ಪಾತಾಳದಲಿ ಬಿದ್ದ ಬಲಿಯನು ಕಂಡು
ದಾನದಪಹಾಸ್ಯಕೆಂಡಿಟ್ಟ ತ್ರೈವಿಕ್ರಮವೊ?
ಏನೊ ಕಲ್ಪನೆಗೊಂಡು ಬರಿದೆ ಕೆಡುಗಳಿಗೆಯಲಿ
ಆತ್ಮದೋಷದ ತೃಪ್ತಿಗಾಗಿ ದುಷ್ಕರ್ಮವಿದ

ನಾರು ಕಡೆವರೊ? ನರಕ ರಂಧ್ರದಲಿ ಸಂತತಂ
ಘೋರ ಪಾತಕಿಗಳನು ಸುಟ್ಟು ಸೂಡುವ ಮಹಾ
ಹುತಿಯ ನರಯಜ್ಞದಲಿ ಮೇಲೆದ್ದ ದೂಸರಿತ
ಧೂಮ ರಾಶಿಯ ಘನಸ್ತಂಭವೋ? ಕೃತಯುಗದ
ಮೊದಲಿನಲಿ ಮುನ್ನೀರ ಕಡೆಕಡೆದು ಕೈಗೊಂಡ
ಕತೆಯನೆಲ್ಲವ ಕೇಳಿಕೇಳಿ ಭೈರವರಾಯ
ನೀ ರಾಮಸಾಗರದಿ ನೀ ತೀರಭೂಮಿಯಲಿ
ಕಲ್ಪವೃಕ್ಷಗಳೇನು--ಕಾಮಧೇನುಗಳೇನು
ಸೌಂದರ್ಯಪೂರದಲಿ ಮಿಂದೆದ್ದ ನಾರಿಯರ
ಪರಿಯೇನು—ಮದ್ದಾನೆಕುದುರೆಗಳನಳವಡಿಸಿ
ಮತ್ತಮರ್ದಿನ ಮುನ್ನ ಸಿಡಿಯೆ ಹಾಲಾಹಲಂ
ಕೊಳುವ ಶಿವನಂ ಕಾಣದಶಿವದಲಿ ಕಡೆಗೋಲ
ನೀ ಕಡೆಯೊಳಿರಿಸಿದನೆ? ನೋಡುನೋಡಾಕಡೆಯ
ಮಲೆನಾಡ ನೈಸರ್ಗಶೋಭೆ ಕಾಳ್ಕಣಿವೆಗಳ
ಸಾಲು ಸಾಲಿನ ನೀಲಿವೋತ್ತರಂಗದ ಮಾಲೆ
ಬಾನ ಮುದ್ದಿಡುವ ತುದಿಗೋಡುಗಳ ಗಾಂಭೀರ್ಯ
ಈ ಸಾನುಶಾದ್ವಲದ ನೀತಶೀತಲವಾತ
ವೇನೊ ಸಂದೇಶದಲಿ ಬಂದ ಪ್ರಣಯದ ದೂತ
ನಂತೆ ಮೈತಟ್ಟಿ ನಿದ್ರಿತ ಜಗವನೆಚ್ಚರಿಸಿ
ಪಿಸು ಮಾತನಾಡುತಿದೆ! ಸಂಭೋಗ ಶೀಲತೆಗೆ
ಗುರುತಿಟ್ಟ ದಿನದಂತೆ ಮೆಲ್ಲಮೆಲ್ಲನೆ ಕಾಲ
ಮಿಲ್ಲಿ ನೀಳ್ಗಳಿಗೆಗಳ ಹೆಜ್ಜೆಯಲಿ ದಾಂಟುತಿದೆ!
ಈ ಸೊಗದ ಪೀಳಿಗೆಗೆ ಈ ಠಾವಿನೇಳಿಗೆಗೆ
ಈ ತೋಷ ಭೂಮಿಕೆಯ ಮಳೆಬೆಳೆಗಳುನ್ನತಿಗೆ
ಕೀಳ್ತನದ ಕೆಡುಮನಸು ಕೆಡುಗೈಮೆ ಕೆಡು ಮಾತು
ಕೆಡುಗಣ್ಣು ಕಿಸುರದಂತಿಟ್ಟ ಬೆದರಕನಿವನೊ?

ಭವದ ತುಮುಲಿಗೆ ಸಿಲುಕಿ ಜಗಳ ಜಂಜಡದುರಿಗೆ
ಸುಟ್ಟು ಸಿಡಿಮಿಡಿಗೊಂಡು ಬವಣೆ ಬಿರುಗಾಳಿಯಲಿ
ಹೊಯ್ದಾಡಿ ಹಾಯ್‌ಹರಿದು ಹೊತು ಹುಮ್ಮಸವಳಿದ
ಬಾಳ್ವೆಹಡಗಿನ ತುತ್ತತುದಿಯೊ? ಚೆಲುಬಿಂಕದಲಿ
ಬೀಗಿ ಬಂಡುಣಿಗಳನು ಸೋವ ಸಂಪಗೆಯಂತೆ
ಹೆಣ್ತನದ ಹೊಸಬಂಯಕೆ ಹೊಂಗನಸುಗಾಣದಿಹ
ಮಾನವತಿಯರ ವೃಥಾ ತಾರುಣ್ಯಕೊದಗುತಿಹ
ಕಿಂವದಂತಿಯ ಕಾಮ ಕಿಂಪುರುಷನಿವನೇನೊ?
ಈ ವಸುಂಧರೆಯ ಸಿರಿಗೊರಳ ಹಾರಕೆ ಬಿಗಿದ
ನಿತ್ಯ ಸೌಮಾಂಗಲ್ಯ ಮಂತ್ರಮಣಿಯೋ? ಮರಣ
ಪೀಠ ಮಧ್ಯದೆ ನೆಟ್ಟ ಪ್ರಾಣಲಿಂಗವಿದೇನು?
ಏನಿದದ್ಭುತರೂಪ ನಿಂದಿದೆ ಭಯಾಕಾರ—!
ಎಂದು ಬಾಯ್ಬಿಟ್ಟು ನೋಡಿದೆನತ್ತ ಸುತ್ತಲೂ
ಕತ್ತಲಾಗುತಲಿತ್ತು. ನೇಸರನ ಕೆಂದೇಸಿ
ಕೆನ್ನೀರ ಚೆಲ್ಲಿದಂತಿರಲು ಮಸಣದೆ ನಿಂತ
ಭೈರವನಿದೇನೆಂದು ಬೆಚ್ಚಿ ಬಾಳಾಸೆಯಲಿ
ನೂರು ಮೆಟ್ಟಿಲನಿಳಿದು ಹಿಮ್ಮೆಟ್ಟಿತೀ ಪ್ರಾಣ!
ಅಂತು ಬದುಕಿದೆನೆಂದುಸಿರ್ಗರೆಯುತಿರಲಾರೊ
ಕಿಲಕಿಲನೆ ನಕ್ಕು ಕೈತಟ್ಟಿ ಬಾ ಬಾರೆಂದು
ಕರೆದಂತೆ ಕೇಳಿಸಿತು! ಏನು ಮಂಜುಳನಾದ!
ಮೊದಲ ಮಾತಿನ ಹಕ್ಕಿ ನಿದ್ದೆಯಡರಿದ ಭೋಗ
ಜೀವನದ ಬಾಗಲಿನ ಕದ ತಟ್ಟಿ ಕರೆದಂತೆ
ಕೇಳಿಸಿತು! ಬೇಕು ಬೇಡೆಂಬೆರಡು ಮನಸಿನಲಿ
ತಳುಹಿ ನೋಡಿದೆನೊಮ್ಮೆ—ಏನಿದಚ್ಚರಿಯುಮುಮ!
ಮುಂದೆ ತೋರುವ ವಿಶ್ವರೂಪದಡಿಯಲಿ ನಿಂದು
ಹಸುಗೂಸು ಕೈ ಯೆತ್ತಿ ಕಿಲಕಿಲನೆ ನಗುನಗುತ

ಬಾರೆಂದು ಕರೆದಿತ್ತು! ತಾಯ ತೋಳಕ್ಕರೆಯ
ಬೆಚ್ಚನೆಯ ಬಿಗಿತದಲಿ ಮೊಲೆವಾಲ ಕಿರುಗುಟುಕ
ನುಳಿದು ಬೆದರದೆ ನಿಂದ ಗಡಸುತನವೇನೆಂದು
ಬೆಚ್ಚಿದೆನು. ಮನವಾರೆ ಮೆಚ್ಚಿದೆನು. ಮೆಲ್‌ಮೆಲನೆ
ಮಾಂತ್ರಿಕನ ಕಡೆ ನಡೆವ ಭೀತಸರ್ಪದ ರೀತಿ
ಆ ಭವ್ಯ ಮೂರುತಿಯ ದಿವ್ಯ ಸನ್ನಿಧಿಗೈದಿ
ನೋಡಿದೆನು. ನಿರ್ನೆರಂ ಬೆಚ್ಚರಂಗೊಂಡಹದ--
ನೆಲ್ಲಿ—ನಿಷ್ಕಲ್ಮಷದ ಹಾಲು ಹಸುಳೆಯ ಹೃದಯ
ದೊಳನೋಟವರಿವೆಲ್ಲಿ! ನಲ್ನೋಟದಕ್ಕರೆಯ
ಸಕ್ಕರೆಯ ಸರಸದಲಿ ನೀಳ್ದೋಳನಿಳಿಗೈದು
ತಕ್ಕೈಸುವಂತಿತ್ತು. ಮತ್ತೆ ನೋಡಿದೆನೊಮ್ಮೆ
ಕಿಲಕಿಲನೆ ನಗುನಗುತ ಮಗುವು ಮಾಯಕವಾದು—
ದಾ ವಿಶಾಲಸ್ಕಂಧಮೂಲದಲಿ! ಬಾಲರೊಳು
ಬಾಲನಿವನೇನೊ — ಮಾನುಷರೊಳತಿಮಾನುಷಂ
ಜೈನ ಮನ ಸಾಗರದ ಮಥಿತಾರ್ಥಬೋಧೆಯಲಿ
ನಿಂತ ನಿಶ್ಚಲಧರ್ಮ ಮೂಲ ಮಾನಸ್ತಂಭ!
ನಮೋ ಗೋಮಟರಾಯನೆಂದು ಪೊಡಮಟ್ಟು ಚಿರ
ಪುಣ್ಯಪುಳಕಿತನಾಗಿ ಧನ್ಯನಾದೆನು ನಾನು!

೧೪—೨—೫೦

---

## ನವೋದಯ

ನಸುಬೆಳಕು ಬಂದಿಹುದು ಬಾನ ಕೊನೆಯಲಿ ಕೊಳಕು
ಕತ್ತಲೆಯ ಕೈವಾಡ ಕಳೆಯುತಿಹುದು
ಎಳೆತನದ ಕೆನ್ನೆಯಲಿ ಮಂದಹಾಸದ ಮಿರುಗು
ಕಂಡಂತೆ ಹೊಂಬಿಸಿಲು ಹರಡುತಿಹುದು

ಮುಗುದತನದೋಕುಳಿಯ ಕೆಂಪುಗಲ್ಲದ ಕನ್ನೆ
ಯಳ್ಕರೆಯ ನೋಟದಲಿ ನಗುತಿರುವಳು
ಹಳೆತನದ ಚುಕ್ಕಿ ಮೇಲ್ಮುಸುಕನೋಸರಿಸಿ ತಿಳಿ
ತನದ ದುಗುಲವನುಟ್ಟು ಕಾದಿರುವಳು

ಆ ರೂಪದಾಸರಿನ ದಿವ್ಯತೆಗೆ ಮನಸೋತು
ಕೂಗುತಿದೆ ಜೀವಿಗಳ ಕೊರಲ ದಾಟಿ
ಆನಂದದನುಭವದ ಸೆಳೆತದಲಿ ಮೈಮರೆದು
ಸಾಗುತಿದೆ ಸಂಸಾರ ಕೋಟಿಕೋಟಿ

ಜಡತೆಯಲಿ ಹುದುಗಿರುವ ಚೇತನವು ಕೈಯೆತ್ತಿ
ಕೂಸಿನಂತಳುತಿಹುದು ಬೆಳಕಿಗಾಗಿ
ತಂತಿಯಲಿ ಬಿಗಿದಿರುವ ಭವ್ಯನಾದನಿರೂಪ
ತೂರುತಿದೆ ನೆಮ್ಮದಿಯ ಗಾಳಿಗಾಗಿ

ಸಾಕಿರುಳ ತಾರಕೆಯ ತತ್ಪರತೆ ಸೊದೆಯುಗುವ
ಚಾರುಚಂದ್ರಿಕೆಯ ಸೌಂದರ್ಯಪೂರ
ಆ ಕಡೆಯ ತಂಗಾಳಿ ವಿರಹಿಣಿಯರಭಿಸಾರ
ಕಾದಲರ ಕಂಬನಿಯ ಹೃದ್ವಿಕಾರ

ಬಾನಹೆಣ್ಣಿಗೆ ಹೊಸತು ಬೇನೆ ತೊಡಗಿದೆಯಂತೆ
ಏನೊ ಹೊಸಹುಟ್ಟು ಮುಂಗಾಣಲಿಹುದು
ಮೌನದಲಿ ಮೊನೆಗೊಂಬ ದಿವ್ಯಕಲ್ಪನೆಯೊಂದು
ಶೂನ್ಯಗರ್ಭವನೊಡೆದು ತೋರಲಿಹುದು

ಹಸಿವು ಹೊತ್ತಿದ ಜೀವಕೋಟಿ ಕಾತರಿಸಿ ಕಣ್
ಹೊಸೆದು ಬಾನತ್ತಕಡೆ ಕೈನೀಡಿದೆ
ಬಸವಳಿದು ಭಾವಗಳ ಬರಗೊಂಡ ಮಾನವ್ಯ
ದಸು ನಿಮಿರಿ ಬಯಕೆಯಲಿ ಬಾಯ್ದೆರೆದಿದೆ

ಇದು ಕಳೆದ ಕತ್ತಲಿನ ಗೂಢಗಾಂಭೀರ್ಯದಲಿ
ಸೆರೆಗೊಂಡ ಬಾಳ್ಕೆಯು ನವಾನುಷಂಗ
ಇದು ವೃಥಾವಿಷಯಗಳ ಹಳಸಿದಾಂತರ್ಯದಲಿ
ಕಳಕಳಿಸಿದಾತ್ಮದ ಸುಷುಪ್ತಿಭಂಗ

ಬೀಣೆಯಿಂಚರವಿರಿಸಿ ಬಿರುಗಾಳಿ ಬೀಸಲಿದೆ
ಹಲವು ಹೂಗಳ ತೋಟ ನೆಲಸಮವಲಾ !
ತಿಳಿಜೊನ್ನ ಬಾವನ್ನದೇಳ್ತರವನೋಸರಿಸಿ
ಸುಟ್ಟುರಿಪ ಬೇಸಗೆಯ ಪರ್ವಕಾಲ !

ಮುಸುಕಿನಾ ಜಾಡ್ಯದಲಿ ಹಸಿವು ಹಿಂಗದ ಹರಣ
ಹೊಸತು ಬಾಯ್ರುಚಿಗಾಗಿ ಹಾತೊರೆದಿದೆ
ತನ್ನ ತನುವನು ತಾನೆ ಕೊಯ್ದು ಕೈಬಟ್ಟಲಲಿ
ತಿಂದು ತೇಗುವ ಚಾಗ ಮುಂದೊದಗಿದೆ

ರಾಜರಾಜರ ಸುಖದ ಸೇವೆಯಲಿ ಸಾಯದಿರು
ಸಾವಿಗೂ ಬೆಲೆಗೊಡುವ ದಿವಸವಿಂದು
ದುಃಖಿತರ ಸಾಂತ್ವನೆಯೊಳುಗುವ ಕಂಬನಿಯೊಂದೆ
ಮೂಜಗದ ಮಾಂಗಲ್ಯದಮೃತಬಿಂದು !

ಎಲ್ಲರೊಳು ಸರಿಸಮತೆಯೆಲ್ಲರೊಳು ದೈವಿಕತೆ
ಎಲ್ಲರಿಗು ಬಹ ಗಾಳಿ ನೀರು ಬೆಳಕು
ಬಲ್ಲಿದರ ಬಗಲೊಳಗೆ ಸಿಲುಕುವಾ ಕಾರ್ಪಣ್ಯ
ದಳ್ಳಿದೆಯ ಕಿರಿತನವನತ್ತ ನೂಕು !

ಅದಕೊ ನೋವ್ ನೆಂಟತನಕೊದಗಿ ವೈನೆರೆದಿಹುದು
ಬೆದರದಿರು. ಮುನ್ನಡೆದು ಕೈಯ ಕುಲುಕು
ಬದುಕು ಬಾವನ್ನ ಸೌಸವಗುಡುವಮುನ್ನ ಜಗ
ದನುಭವದ ತೀಟದಲಿ ಸವೆಯಬೇಕು

ಏರುಮರದಿಂದ ಕೆಳಜಾರಿಬಿದ್ದಿದೆ ಬೆಳಕು
ದಾರಿಯಲಿ ಹೊರಳುತಿದೆ ಹಸುಳೆಯಂತೆ
ದೂರದಲಿ ನೆಳಲು ಕೈತೂರಿ ಸಂತೈಸಿ ಪೆರ
ಸಾರುತಿದೆ ಕುಲಗೆಟ್ಟ ತಾಯಿಯಂತೆ !

ಈರೇಳು ಲೋಕವೇನಮಿತ ವಿಶ್ವಾಮಿತ್ರ
ರದ್ಭುತ ಮಹೋನ್ನತಿಯ ರಮ್ಯಸೃಷ್ಟಿ
ಯಾರಿಗೆಟಕದ ಕಲೆಯ ಭಂಡಾರವಲ್ಲ—ಸಂ
ಸಾರವೇ ಸಾಮರಸದಮೃತ ವೃಷ್ಟಿ

ಅಳಿಯು ನಲಿದಾಡಿದರೆ ಗಿಳಿಯು ಮಾತಾಡಿದರೆ
ತೊದಲಿದರೆ ಕೋಗಿಲೆಯ ಮಧುರನಾದ
ಮೊಳಗದೆ—'ನವೋ ಭವತಿ ಜಾಯಮಾನಃ ಪುರುಷಃ'
ಎನುವ ಹರ್ಷೋದ್ಗಾರದಮರವೇದ !

ಅಚ್ಚರಿಯ ಜಗತಿ ತಾನೆಚ್ಚತ್ತು ನೋಡುತಿದೆ
ಹುಚ್ಚುಮೆಚ್ಚುಗೆಯ ದಿವ್ಯಾವತಾರ !
ನಿದ್ದೆಯಿಂದೆದ್ದು ಕಣ್ದೆರೆದು ನೋಡತ್ತಕಡೆ
ಹೊದ್ದಿದೆ ನವೋದಯದ ಪೀತಾಂಬರ !

೮—೮—೧೯೫೨

---

## ಜಯಭೇರಿ

### ೧

ಮೊಳಗಿತು ಜಯಭೇರಿ !
ದಿಗ್ದಂತಿಗಳೆದೆನಡುಗಿಸಿ
ಭೂವ್ಯೋಮವನಾವರಿಸಿ
ಸಹ್ಯಾಚಲದಂಚಲದಲಿ
ಸುಖ ಶಾಂತಿಯನಪ್ಪಳಿಸಿ

ಕಾಳ್ಕಣಿವೆಗಳಂತರದಲಿ
ಕಲ್ಲೋಲದ ಹೊಳೆಹರಿಸಿ
ಗಿರಿದರಿಗಳ ಕಿವಿದೆರೆಯಲಿ
ಬಿರುಗಾಳಿಯನೆಳ್ಚರಿಸಿ
ಮಾದೇವನ ಮಂದಿರದಲಿ
ತಾಂಡವದ ಭ್ರಮೆಗೊಳಿಸಿ
ಪಾತಾಳದ ಪೀಳಿಗೆಯಲಿ
ಭಯಕಂಪನವನು ಬಳಸಿ
ಮೊಳಗಿತು ಜಯಭೇರಿ!

೨

ಭಾಪುರೆ! ಜಯವನಿತೆಯ ಮುಂ
ದಲೆ ವಿಡಿದೆಳತಂದಿಹರು
ಸಾವಿನ ಸಮುಸಮುಕ್ಕೆಯುಲಿ
ಕಾದಿದ ಕಲಿಭಟರಿವರು !
ಹೊಸ ಹುರುಪಿನ ಹುಮ್ಮನಸಿನ
ಮೆಚ್ಚುಗೆಯಲಿ ಮಿಂದಿಹರು
ಗೆಲುವಿಕೆಯಲಿ ತಮ್ಮನೆ ತಾವ್
ಕೊಂಡಾಡುತ ಬಂದಿಹರು !
ಕೆಂಬಣ್ಣದ ದೂಳೇರಿದೆ
ಮುಗಿಲಟ್ಟದ ತುದಿ ತನಕ
ಕಣ್ಮುದುರಿಸಿ ತಡವರಿಸಿದೆ
ಕಟ್ಟಾಳ್ಗಳ ಕೀರ್ತಿ ಮುಖ !
ಜಯ ಘೋಷದ ನಿರ್ಘೋಷಕೆ
ಕೆಳಗುದುರಿತು ನಕ್ಷತ್ರ

ಪುರಸತಿಯರ ಹೂ ಮಳೆಯಲಿ
ಸಿರಿ ಸುರಿಯಿತು ಸರ್ವತ್ರ !

ಕಣ್ಣಿದ್ದೂ ಕಾಣದ ಕಿವಿ
ಕಿವುಡೆನಿಸುವ ಕಲ್ಪಾಂತ
ಕರಣಂಗಳ ಘರ್ಷಣೆಯಲಿ
ಜಡ ಜಗತಿಯೆ ಜೀವಂತ

ಅರಿವಿಲ್ಲದ ವಾಸನೆಯಲಿ
ಸರಿದಿದೆ ಜನ ಸಂದೋಹ
ಮರುಭೂಮಿಯ ಗಾಳಿಯ ತೆರ
ಹುರಿ ಹುರಿದಿದೆ ಹೃದ್ದಾಹ !

ಸೋಲ್ಬಳಗದ ಕಗ್ಗತ್ತಲೆ
ತಲೆ ಮರೆಸಿತು ಹೌಹಾರಿ
ಸಾಲ್ಸೊಡರಿನ ಸಂಭ್ರಮದಲ
ಹಗಲಾಯಿತು ಹೆದ್ದಾರಿ

ಅಳ್ಳೆದೆಯರ ಕಣ್ಗೊನೆಯಲಿ
ಕಾತರ್ಯದ ಕಣೆಯೂರಿ
ವೀರರ್ಕಳ ಸಾಫಲ್ಯಕೆ
ಗುಡುಗುಡಿಸಿತು ಜಯಭೇರಿ .

೩

ಮರುಗಿದೆ ಮಗು ನೋಡಾಕಡೆ
ಮಗು ಮರುಗಿದೆ ಬಲ್ಬೆದರಿ !

ಕಣ್ದೆರೆದಿದೆ ಕಾತರಿಸಿದೆ
ಬಿಚ್ಚೆದೆಯಲಿ ಬಸವಳಿದಿಹೆ

ಎಡ್ದೆಸೆಯಲಿ ಕಣ್ಣಾಯಿಸಿ
ಕಂಬನಿಗಳ ಮಳೆಗರೆದಿದೆ

ನಿಡು ಸೇದೆಯ ಬಿಗುಗೊರಳಿಲಿ
ನಡನಡುಗುವ ಚೆಂದುಟಿಯಲಿ
ಸುರಿಸಿಂಬಳ ಬಾಯ್ ಜೊಲ್ಲಿನ
ಸಂಯೋಗದ ಹೊಸ ಹುಟ್ಟು !

ಕಿರುಗೂಡಿನ ಗೂಡಾರದ
ಮುಚ್ಚಳದಲಿ ಮೈಮುದುರಿಸಿ
ಕರೆಕರೆದಿಹ ಹಕ್ಕಿಯ ತೆರ
ಮಗು ಮರುಗಿದೆ ಬಾಯ್ಬಿಟ್ಟು !

೪

ಇದು ನಾದ ಬ್ರಹ್ಮನ ನವ
ರೂಪದ ಸಾಕ್ಷಾತ್ಕಾರ
ಇದು ಭಾವ ಬ್ರಹ್ಮಾಂಡದ
ಚೈತನ್ಯದ ಚೀತ್ಕಾರ !

ಇದು ಸುಂದರ ಸಾಹಿತ್ಯದ
ರಸಗಂಗೆಯ ಸತ್ಕಾರ
ಇದು ಮಂತ್ರ ಮಹತ್ಪೂರದ
ಪ್ರಥಮೋದ್ಗಮದೋಂಕಾರ !

ಇದು ವಿಶ್ವದ ವಿನ್ಯಾಸಕೆ
ವಿಧಿ ತೊಡಗಿದ ಹೊಸ ಬೇನೆ
ತುಮುಲೆಣಿಕೆಯ ತತ್ವಂಗಳ
ಕಡೆದಮೃತದ ಸಿರಿಸೋನೆ !

ಜನಜಂಗುಳಿ ಗಾವಳಿಯಲಿ
ಇದು ಕೇಳದ ಕಲ್ಯಾಣ
ಹುಮ್ಮನಸಿನ ಹೆಚ್ಚಳದಲಿ
ಇದು ಕಾಣದ ಪರಿಮಾಣ—
ಮಗು ಮರುಗಿದೆ ಬಲ್ಬೆದರಿ !

ಸುತ್ತಲು ಕಂಡೆಣ್ದೆಸೆಯಲಿ
ಕಿವಿಯಾನಿಸಿ ರಣಜೀವಿ
ಎತ್ತಿದ ಕಾಲ್ ಮುಂದ್ಯೆಸದೆ
ಹಿನ್ನಡೆದನು ದಿಗ್ವಿಜಯಿ

ಮಗು ಮರುಗಿದೆ, ನೆಗಹಿದ ತೋ-
ಳಕ್ಕರೆಯಲಿ ಬಳಿಸಾರಿ
ಬಗೆ ತುಂಬಿದ ಭಾವನೆಯಲಿ
ನಿಂದನು ಮೊಣ ಕಾಲೂರಿ

ಬಲ್ದೆರೆಗಳ ಹೊಯ್ದಾಟವ
ನೊಮ್ಮೆಗೆ ತಡೆವಿಡಿದ ಪರಿ
ಅಚ್ಚರಿಯಲಿ ಬೆಚ್ಚಿತು ಕೈ
ಹಿಡಿದಂತುಟು ವಿಜಯಸಿರಿ—
ಸದ್ದಡಗಿತು ಜಯಭೇರಿ !

೨೫—೧೧—೧೯೫೨

## ಸಮಾಜ ಸೀತೆಗೆ

೧

ಆರೊ ನೆರೆನಂಬಿರುವ ರಮ್ಯದೇವಾಲಯಕೆ
ಕೈಮುಗಿದು ಬೇಡಲಿಕೆ ನಾನು ಬಂದವನಲ್ಲ
ಆರೊ ಹಂಬಲವೈಸಿ ಬಿಗಿದ ಬೀಣೆಯರುತಿಗೆ
ದನಿಗೂಡಲೆಂದು ಬಿಕ್ಕಳಿಸಿ ಬಂದವನಲ್ಲ

ಆರೊ ಬಟ್ಟಲನಿಟ್ಟು ಸುರಿದ ತಂಗಳಕಾಗಿ
ಬಾಯ್ದೆರೆದು ಜೊಲ್ಸುರಿದು ಹಸಿದು ನಿಂದವನಲ್ಲ
ಆರೊ ಹಣತೆಯನಿಟ್ಟು ಹೊಸೆದ ಸೊಡರಿನ ಸುತ್ತ
ಸುರಿಯಲೆಣ್ಣೆಯ ಕುಡಿಕೆ ಹೊತ್ತು ತಂದವನಲ್ಲ

ದಾರಿದಾರಿಯ ನಡತೆಗಾರಾರೊ ಬಂದರೆಂ
ದೂರುಗೋಲಾಗಿ ಕೈಗೊಂಡು ಸಾಗುವನಲ್ಲ
ಕೇರಿಯಲಿ ಕಂಡ ಕಸ್ತೂರಿಮಲ್ಲಿಗೆಯ ಪರಿ
ವಾರವನು ಮೂಸಿ ಮೇಳೈಸಿ ಮೆಚ್ಚುವನಲ್ಲ

ನಿನ್ನ ಶಾಶ್ವತ ಸುಖದ ಹೊನ್ನಬಟ್ಟಲ ತೆರವು
ಗೊಂಬ ಹಾರಯಿಕೆಯಲಿ ಹಸಿದಿರುವೆನು
ನನ್ನ ಗುಡಿಯಲಿ ನಿನ್ನ ಮಧುರ ಚೇತೋವನಿಯ
ಕಾಂಬ ಕೈವಲ್ಯದಲಿ ಕಾದಿರುವೆನು

೨

ಏಕೆ ಕಣ್ಣಿನ ಕೊನೆಯ ಕಾಮಿತದ ಕರೆಗಳಲಿ
ಕಾತರದ ಕಣ್ಣೀರು ಬಾಸಣಿಸುತಿಹುದು?
ಏಕೆ ಚಂಚಲ ಹೃದಯ ನಿಶ್ವಾಸದಳತೆಯಲಿ
ಕಳವಳದ ಕೈವಾಡ ಮುಂಗಾಣುತಿಹುದು?

ತೇಲು ನೋಟದ ಚಿಂತೆ ಕೆದರುಗೂದಲ ಕೊರತೆ
ತೊದಲುಮಾತಿನ ಮನೋವಿಷಯಕವಿರಕ್ತಿ
ಮೇಲು ಸೆರಗೆದೆಯ ಧೃತಿಯೊಡನೆ ಕೆಳಜಾರುತಿದೆ
ಹಾಲು ಕೆಟ್ಟಂತಿರುವುದೇನಿದೀ ರೀತಿ?

ಏನೊ ಪಿಸುಮಾತಿನಲಿ ಗಾಳಿತೂರಿದ ಶಂಕೆ
ಕಿವಿಗೆ ನಂಜನು ಕಾರಿ ಕೊರೆಕೊರೆಯುತಿಹುದೆ?

ಏನೊ ಕೀಳ್ಮನಸಿನಲಿ ಕಂಡ ಕಿಲ್ಬಿಷದಂಕೆ
ಹೃದಯದಲಿ ಕಣೆಯೂರಿ ಕಾತರಿಸುತಿಹುದೆ?

ಏನು ಸುಗ್ಗಿಯ ತೆನೆಯ ತುದಿಯ ಸಿಂಗಾರದಲಿ
ಕುಳಿರು ಕೂಡಿರುವಂತೆ ಬಾಗಿರುವುದು?
ಏನು ಕತ್ತಲ ಮೊದಲಗಾಳಿ ಕಮ್ಮನೆಯಲರ
ಮೈಮುಟ್ಟಿದಂತೆ ಮಂಕಾಗಿರುವುದು?

೩

ಹೊರಹೊರಗೆ ನಿಂತು ನಸುನಕ್ಕರೇಹಿತಮೆನಿತೊ
ಬರಬೇಡ ಬರಬೇಡವೀ ಬಾಳ ಬಳಿಗೆ
ಕಿರುದನಿಯ ಮಾತಿನಲಿ ಮನವೈಸಿ ಮುಗುಳೆ ಮು
ಕ್ಕರಿಸಿ ಹಾರುವ ತುಂಬಿಯಂತೆ—ಅರೆಗಳಿಗೆ!

ಒಂದು ಬೀಜಾಕ್ಷರದ ಸರಸ ಭಾವೋದಯಕೆ
ಹಲವೆಂಟು ರೂಪದಲಿ ಹೊಸೆದಲಂಕಾರ
ಒಂದು ಲೋಕೋತ್ತರದ ಸುಖದ ಸಾಕ್ಷಾತ್ಕಾರ
ದನುಗಮಕೆ ಸಾಲದೀ ಕ್ಷಣಿಕ ಸತ್ಕಾರ!

ತೊಟ್ಟುಕೀಳುವ ಮುನ್ನ ಯೋಚಿಸೊಂದರೆಗಳಿಗೆ
ಮತ್ತೆ ಮೈಹೊಂದಿಸಲು ಬಾರದೀ ಬದುಕು
ನೆಟ್ಟಮೊಳಕೆಗೆ ನೀರುಹೊಯ್ವ ಹುಮ್ಮಸಗೊಳದ
ದುಷ್ಚರಿತ್ರೆಯ ಕೀಟಗಳನತ್ತ ನೂಕು!

ಈ ಕಾಮಕಲ್ಪನೆಯ ಕಲ್ಯಾಣಮಂಟಪದ
ಬಾಗಿಲಲಿ ಕುಳಿತೆನಿತೊ ವರುಷ ವರುಷ
ಸಾಕು ಬೇಕೆಂಬ ಸುಖದುಃಖಗಳ ಸೇವೆಯನು
ಕಾದು ಕೈಗೊಂಡವನೆ ಪುಣ್ಯಪುರುಷ!

೪

ಜೀವನದ ಭಾವುಕತೆ ಚೆದರಿ ಚೆಲ್ಲದ ರೀತಿ
ಭವದ ನೇಣಿಲಿ ಬಿಗಿದ ಮಧುರಸಾನ್ನಿಧ್ಯ
ಆವುದೋ ವಾಂಛಿತಕೆ ನಂದನೋದ್ಯಾನದಲಿ
ಪರಿಮಳಿಸುತಿಹ ಪುಣ್ಯಫಲದ ನೈವೇದ್ಯ.

ನೊಳೆತು ತೋಳ್ಬಳ್ಳಿಯಲಿ ಚಿಗುರಿ ಚೆಂದುಟಿಗಳಲಿ
ಹೂತು ಹೆಣ್ಬಯಕೆಯಲಿ ಹುಟ್ಟಿರುವ ಜೇನು
ಅಮಮ ಮಂಜುಳಮತಿಯ ಮೌನದಾಂತರ್ಯದಲಿ
ಮೊನೆಗೊಂಡ ಮೆಚ್ಚುಗೆಯ ಮನ್ನಣೆಯಿದೇನು!

ಕಟ್ಟಡವಿ ಸೇರಿದರೆ ಚಿತೆಯ ಮೇಲೇರಿದರೆ
ಏನು ಬಂದರು ಬರಲಿ ಯೆನುವ ಸಾಕಲ್ಯ
ಕಾಲ ಕಾಲದ ಕರ್ಮಶೀಲ ಸಂಪರ್ಕದಲಿ
ಮೇಲು ಕೀಳೆಂಬ ಮಾತಿರದ ಕೈವಲ್ಯ

ಸೆರಗಿಕ್ಕಿ ಸಹನೆಯಲಿ ಸಹಜ ಸೌಜನ್ಯದಲಿ
ನಗುವ ದಿವ್ಯಾಂಗನೆಗೆ ಮನಸು ಸೋತೆ
ಬೆತೆಯ ಮುಂಬೆಳಗಾಗಿ ಸುಖದ ಹಿನ್ನೆಳಲಾಗಿ
ನೆರವಾಗಿ ನಿಂದಳು ಸಮಾಜಸೀತೆ!

೨--೧೨--೧೯೫೨

---

## ಆನಂದತೀರ್ಥ

೧

ತೆಂಗು ತುಂಬಿರುವ ಹಾಲ್ಗೊನೆಯ ತಾಯ್ತನದಿಂದ
ಕೈನೀಡಿ ಕರೆಯುತಿಹ ಸೊಗಸುನೋಡು
ತುಂಗಲಹರಿಗಳೆದ್ದು ಸದ್ದಡಗಿ ಮಲಗುತಿಹ
ಪಡುಗಡಲತೀರದೀ ತುಳುವನಾಡು

ಕೊಡಲಿರಾಮಗೆ ಶರಧಿಕೊಟ್ಟ ಕೈಗಾಣ್ಕೆಯಿದು
ಎಡಬಲದ ತೋಟಗಳ ಸೊಗದ ಬೀಡು
ಕಡಲು ಕಟ್ಟಡವಿಗಳ ನಡುವೆಕುಂದಣಗೊಂಡ
ತೌಳವರ ಸಂಸ್ಕೃತಿಯ ಜೇನುಗೂಡು

ಬಂಟತನವಿಲ್ಲಿ ನೆಮ್ಮದಿಯ ನಯನಿರ್ಮಲದ
ನೆಂಟತನಕೊದಗಿ ಬಿಗಿದಿರುವ ಜೋಡು
ತುಂಟತೆರೆಗಳ ತಲೆಯ ಮೆಟ್ಟಿ ಕುಣಿದಿಹ ದೋಣಿ-
ಗಂಟಿರುವ ಮೊಗವೀರರೆದೆಯ ಹುರುಡು

ಬಯಲಾಟಗಳ ರೀತಿ ಕಂಬಳದ ವಿಖ್ಯಾತಿ
ಕೋಳಿಯಂಕದ ಮಹಾಬಿಂಕದರಿಕೆ
ಜೈನ ಶಾಂಕರ ಮಾಧ್ವರೆಂಬ ಸಮತೂಕದಲಿ
ಕುರುಹಿಟ್ಟು ಕಳೆದ ಚಾರಿತ್ರದೆಣಿಕೆ

೨

ಎಂಟುನೂರ್ ವರುಷಗಳ ಹಿಂದೆ ಹಿಂದಕೆ ಸರಿದು
ನೋಡು ಬೆಳಗಿದ ಭವ್ಯ ಭೂಮಿಕೆಯನು
ಎಂಟು ಮಠಗಳ ಮಂಗಳಾಶ್ರಯದ ನೆಳಲಿನಲಿ
ಬಳೆದೊಂದು ಬೀಜದ ನಿಜೋನ್ನತಿಯನು

ಆವ ನಂದನದಿಂದ ಸಿಡಿದುಬಿದ್ದಿತೊ ಬೀಜ
ಹೊಸತೊಂದು ಮಂದಾರ ಮಗಮಗಿಸಿತು
ತೀವಿದಾತ್ಮಾಂಗಣದ ದುರ್ವಿಷಯ ವಾಸನೆಯ
ವಾಂಛಿತಂಗಳನತ್ತಲೋಸರಿಸಿತು

ಆರೊ ಸಚ್ಛಾಸ್ತ್ರಗಳ ಬೆಳಕು ಬೀರಿದರಂತೆ
ಮಾಯೆಮುಸುಕಿದ ಕಾರಕತ್ತಲಿನಲಿ
ಆರೊ ಭಕ್ತಿಯ ಸುಲಭ ಮಾರ್ಗವರುಹಿದರಂತೆ
ತಿಳಿವು ತೊತ್ತಳಗೊಂಡ ಕೊತ್ತಳದಲಿ

ಇದು ತತ್ವಮಸಿಯ ತೋಟಕೆ ಬಂದ ಬಿರುಗಾಳಿ
ತಾಮಸದ ಕಣ್ಮಸಕು ತೆರೆದ ಗಾಳಿ
ಇದು ವೇದ ತತ್ವಗಳ ಸಾತ್ವಿಕೋದಯಕಾಗಿ
ದೈವಿಕತೆಯೂದಿರುವ ತಣ್ಪು ಗಾಳಿ

೩

ಕೋಡುಗಲ್ಲಿನ ತುದಿಯ ಜೋಡಿರದ ಕೌಶಲವ
ನೋಡಿ ಸ್ವೈರಗಾಗಿ ನಿಂದುದೇನು?
ಮೂಡುಬಿದರೆಯ ಕುಸುರುಕೆತ್ತನೆಯ ಕಗ್ಗಲ್ಲ
ಕಾವ್ಯರಸದಲಿ ಮಿಂದು ಬಂದುದೇನು?

ಏರುಮನಸಿಲಿಬಂದ ದಾರಿಗನೆ ಬಾರಿತ್ತ
ಗೋಪುರಂಗಳನಿಲ್ಲಿ ಕಾಣಲಾರೆ
ಯಾರೊ ಕಾರುಣ್ಯದಲಿ ಸುಪ್ತಚೇತೋವನಿಗೆ
ಇದು ಸುರಿದ ಸದ್ಧರ್ಮದ ತತ್ವಧಾರೆ

ಒಂದು ರೂಪದಲಿ ಪರಮಾತ್ಮನನು ತಿಳಿದು ಮ-
ತ್ತೊಂದರಿಂ ಜೀವಿಗಳ ನೆಲೆಯನರಿತು
ಮುಂದೆ ಜಡತತ್ವಗಳ ದರ್ಶನಕೆ ನೋಡಿದೇ
ಸಂದ ಹೆಜ್ಜೆಯ ಮಾಸದಿರುವ ಗುರುತು

ಇಲ್ಲಿ ಕಾಣುವ ರೂಪಿನೊಂದು ಭಾವೋನ್ನತಿಯ
ನೀ ಹೆಜ್ಜೆ ಗುರುತಿನಲಿ ಕಾಣಬೇಕು
ಇಲ್ಲಿ ಕಾಲನು ಕಡಿದ ಮಾಯೆಯಭಿಭವದ ದುರ್
ವ್ಯಾಳವನು ಕೊಂದದಟನರಿಯಬೇಕು

೪

ಎಂಟು ಶತಮಾನಗಳ ಹಿಂದೆ ಹಾರಿದ ತುಳುವ
ಬಾವುಟವು ನೋಡಿಲ್ಲಿ ಮೆರೆಯುತಿಹುದು

ಎಂಟು ದಿಕ್ಕಿನ ಜನತೆ ಸಿಚ್ಚಟಂ ಸೀಳ್ಕರಿಸಿ
ಭರವಸೆಯ ನೋಟದಲಿ ನೋಡುತಿಹುದು

ಜೀವ ಜಡಗಳು ಬೇರೆ ಜೀವಜೀವರು ಬೇರೆ
ಜೀವ ಪರಮಾತ್ಮರದೊ ಬೇರೆ ಬೇರೆ
ಸತ್ಯ ಜಗತಿಯಲಿ ಕರ್ಮಾನುಸಾರದ ಭೋಗ
ತೀರುವುದೆ ಮುಕ್ತಿ ನಿಜ ಸುಖದ ಮೇರೆ

ಹರಿಕೃಪಾಲೋಕನಕೆ ನೋಂತು ಮೈಮಡಿಗೊಳಲು
ಈ ಮಧ್ವತೀರ್ಥದಲಿ ಮಿಾಯಬೇಕು
ವರ ಪುರಂದರ ಕನಕ ವಾದಿರಾಜರ ಚಿರ
ಸ್ಮರಣೆಯಲಿ ಕೈಮುಗಿದು ಕಾಯಬೇಕು

ತುಳುನಾಡ ಕೊರಳಿನಲಿ ಮೆರೆವ ಮರಕತವಾಗಿ
ಉಡುಪಿ ಕೃಷ್ಣನ ಕಾಂಬ ಕಾಮಿತಾರ್ಥ
ಖಳರೆದೆಯ ಕಿಲ್ಬಿಷವ ತೊಳೆವ ತತ್ತ್ವಾಮೃತದ
ತಿಳಿಹೊಳೆಯ ಹರಿಸಿದಾನಂದತೀರ್ಥ

೨೪—೧೨—೧೯೫೨

---

## ಯುಗಾದಿಗಾಗಿ —

೧

ಚೆಲುವುಗೆಲವಿನೂರಿನಿಂ ಯುಗಾದಿಗಾಗಿ ಬಂದಿರೆ?
ಯುಗ ಯುಗಗಳ ಪುಣ್ಯಪಾಪ ಹೊರೆಯ ಹೊತ್ತು ಬಂದಿರೆ?

ಮುಗಿಲಿನಂತೆ ಹಗುರವಾಗಿ
ತೇಲಿ ತೇಲಿ ಬಂದಿರೆ?
ಬದುಕು ಬಳಲಿ ಹೆಜ್ಜೆ ಹೆಜ್ಜೆ
ಭಾರಗೊಂಡು ಬಂದಿರೆ?

ಎಸಳು ತೆರೆವ ಹೂವಿನಂತೆ
ನಕ್ಕು ನಕ್ಕು ಬಂದಿರೆ?
ಬಿಸಿಲಕಾದ ಸುಟ್ಟುರೆಯಲಿ
ಗುಡುಗಿನಂತೆ ಬಂದಿರೆ?

ಶರಣು! ಸೊಗಸಿನೂರಿನಿಂ ಯುಗಾದಿಗಾಗಿ ಬಂದಿರೆ?
ಬರಗಾಲದ ಬರಿದು ಹೊಟ್ಟೆ ಬಿಕ್ಕಳಿಕೆಯಲಿ ಬಂದಿರೆ?

೨

ಒಲವಿನೂರುಗೋಲು ಹಿಡಿದು
ನಸುಕಿನಂತೆ ಬಂದುದೆ?
ಗೆಲವುಗಾಳಿ ತೂರಿ ಸುರಭಿ
ಯಲೆಯಲೆಗಳ ತಂದುದೆ?

ನಳನಳಿಸುವ ಮಲರ ಮುದ್ದು
ಮೊಗದಹಾಸ ನಿಮ್ಮದೆ?
ಚಲಿಪಿಲಿಗುಡುವೆಳೆಯ ಹಕ್ಕಿ
ಯೆದೆಯ ಮಾತು ಚಿಮ್ಮಿದೆ!

ಮಕ್ಕಳೇನು ಮರಿಗಳೇನು—
ಏನು ಸುಖದ ಸಮುದಯ!
ನಿಮ್ಮ ಗೈಮೆಗಾವಳಿಯಲೆ
ಮೃತ್ಯುಲೋಕದಪಜಯ!

ಮಸಣದೂರ ಕಿಚ್ಚುಕಾದು
ಕೈಯನೇನು ಸುಟ್ಟಿದೆ!
ಉಸಿರುಕಟ್ಟಿ ಕೊರಳು ಬಿಗಿದು
ಕಣ್ಣಿನೊಸರು ಕೊಚ್ಚಿದೆ!

ಎದೆಯ ತಂಪು ತೋಟಕೆ ಸುಳಿ
ಗಾಳಿಯೇನು ಹೊಕ್ಕಿದೆ
ನೋವು ನಂಜು ನಾಲಗೆಯಲಿ
ಬಾಳನೇನು ನೆಕ್ಕಿದೆ !

ಸಾವು ಸುಳಿದು ಸುಪ್ತಜೀವ
ಕಲೆಯನೇನು ಕುಲುಕಿದೆ!
ಬೇವು ಬೆಲ್ಲದೊಡನೆ ಸೆಣಸಿ
ಬಾಳ್ಸವಿಯನು ಕಲಕಿದೆ !

೪

ಭಳಿರೆ! ಸೊಬಗಿನೂರಿನಿಂ ಯುಗಾದಿಗಾಗಿ ಬಂದಿರೆ?
ಬರಗಾಲದ ಬರಿದು ಹೊಟ್ಟೆ ಬಿಕ್ಕಳಿಕೆಯಲಿ ನಿಂದಿರೆ?

ಆರುಬಂದರಂತು ನಾವು
ಕೈಯನೀಡಿ ಕುಣಿವೆವು
ಗೆಳೆಯರೆಂಬ ಪೊನ್ನತಿಕೆಯ
ಪದಕೆ ಬಾಗಿ ಮಣಿವೆವು

ನಿಮ್ಮ ಪುಣ್ಯ ಪರಿಮಳದಲಿ
ನಮ್ಮ ಬಾಳು ಮಾಸಲು
ನಿಮ್ಮ ನೋವಿನೊಡನಿರುವೆವು
ಕಂಬನಿಯನು ಸೂಸಲು!

ಬಿದಿಯ ಡೊಂಬರಾಟಕಾಗಿ ತಿರೆಯು ನಟ್ಟ ತಿರುಗಣೆ!
ಒಳಿತೊ — ಕೆಡುಕೊ—-ಕೊಳಲಿರುವುದೆ ಬಾಳಿಗಿರುವ ಸಾಧನೆ!

೧೪—೪—೧೯೫೩

## ಕನ್ನಡದ ಕಹಳೆ

೧

ಹತ್ತು ಸಾವಿರ ತೊಡರು ಬಂದರೂ ಬರಲಿ!
ನಮ್ಮ ನಾಡೆಮ್ಮದು—ನಮ್ಮ ನುಡಿ ನಮ್ಮದು

ನಮ್ಮ ಸಂಸ್ಕೃತಿಗಾಗಿ ನಮ್ಮ ಕನ್ನಡಕಾಗಿ
ನಮ್ಮ ಬಿಸಿ ನೆತ್ತರಿನ ಹೊಳೆ ಹರಿಯಲಿ!
ಕನ್ನಡದ ಕುಲರಾಜ್ಯದುನ್ನತೋದಯಕಾಗಿ
ತನ್ನತನದಭಿಮಾನ ಕಣ್ದೆರೆಯಲಿ!

೨

ಅಲ್ಲಿ ಗೋದಾವರಿಯು ಬಚ್ಚಲಲಿ ಮೈಮಿಂದು
ಜಳಕಗೊಂಡಾಡಿರುವ ಕನ್ನಡದ ಕೀರ್ತಿ!
ಇಲ್ಲಿ ಕಾವೇರಿಯಲಿ ತಿಂದು ಕೈತೊಳೆದಿಹಳು
ಕನ್ನಡದ ಮನೆತನದ ಗೌರವದ ಗರತಿ!

ಕನ್ನಡದ ವೈಭವದ ವಿಜಯನಗರವ ಕಟ್ಟಿ
ಕಾದ ಕಲಿಗಳು ನಾವು ನಮ್ಮ ಕುಲಬಿರುದು!
ಚೆನ್ನಿಗರನೆಲ್ಲ ತಮ್ಮಯ್ಯನೆಂದಾಡುತಿಹ
ಹೊಲಸು ಹುಂಬರ ಮಾತು ಸಾಕು ಬಿಡು ಬರಿದು!

ನಮ್ಮ ಮನೆಯಾದರದ ಹೊನ್ನ ಬಟ್ಟಲಲುಂಡು
ಬೊಗಳುತಿಹ ಬಾಂಧವರು ಬಹಳ ಜನರುಂಟು
ತಮ್ಮ ದುರ್ವಿನಯದಪಕೃತಿಯ ಕಾರ್ಪಣ್ಯದಲಿ
ಕುಣಿವ ಕೆಡುಕೀಟಗಳು ಹಲವು ಹದಿನೆಂಟು!

ಅತ್ತಿತ್ತ ಹರಿಹಂಚಿ ಸತ್ತಂತೆ ಬಿದ್ದಿಹುದು
ಹುತ್ತದಲಿ ಹುದುಗಿರುವ ಕನ್ನಡದ ಕೋಟಿ

ಸತ್ತರೆಂದಾಕ್ರಮಣದೊತ್ತರದ ಹೆಜ್ಜೆಯಲಿ
ಮುತ್ತಿ ಬಹರನು ತಳ್ಳು ತಳ್ಳುತಲೆ ಮೆಟ್ಟಿ!

ಬಳ್ಳಾರಿ ಬಳಲುತಿದೆ ನೀಲಗಿರಿ ನರಳುತಿದೆ
ಬೆಳಗಾವಿ ಬಿದ್ದಿರುವ ಗತಿಯಿರದ ಸೊತ್ತು!
ನಾಲ್ಕು ದೆಶೆಯಲಿ ನೋಡು ಕಾಣದಿಹ ಕೈಯಾಟ
ಚದುರಂಗವಾಡುತಿದೆ—ಬಂದಿರುವ ಕುತ್ತು!

ಮಾಯೆಯಲಿ ಮುಂದೈಸಿ ಮೋಹದಲಿ ಬಲೆಬೀಸಿ
ಕೊಳುವ ಕಳ್ಳರ ಪಿಡುಗು ಕಣ್ದೆರೆದು ನೋಡಾ!
ಸಕ್ಕರೆಯ ಸವಿಮಾತಿನಕ್ಕರೆಗೆ ಮನಸೋತು
ಸುಲಭ ಸಂತೋಷದಲಿ ಮೈಮರೆಯ ಬೇಡ!

೩

ಹತ್ತು ಸಾವಿರ ತೊಡರು ಬಂದರೂ ಬರಲಿ!
ನಮ್ಮ ನಾಡೆಮ್ಮದು ನಮ್ಮ ನುಡಿ ನಮ್ಮದು

ನಮ್ಮ ಕಂನಾಡದೊಂದಂಗುಲದ ನೆಲಕಾಗಿ
ನಮ್ಮೆದೆಯು ಸಿಡಿಮಿಡಿದು ಕೈಕುಣಿಯಲಿ!
ಕನ್ನಡದ ಪೂರ್ಣ ಕಲ್ಯಾಣ ಕುಂಕುಮಕಾಗಿ
ನಮ್ಮ ಬಿಸಿ ನೆತ್ತರಿನ ಹೊಳೆ ಹರಿಯಲಿ!

೨—೬—೧೯೪೩

---

## ಸಾಕ್ಷಾತ್ಕಾರ

೧

ಏನೊ ಬರೆಯಲೆಂದು
ಬಳಪವೆತ್ತಿ ಕೂತು
ಗಳಿಗೆ ಕಣ್ಣುಮುಚ್ಚಿ
ಬಾಗಿನೋಡಿದೆ

ಮುಸಕು ಗನ್ನಡಿಯಲಿ
ಮೊಗವು ಮಾಸಿದಂತೆ
ಭಾವವೆಲ್ಲ ಹಳಸಿ
ಮೌನವಡರಿದೆ

೨

ಮನಸು ತುಂಬಿದಾಸೆ
ಹೊನಲಿನಂತೆ ಸೂಸಿ
ಬದುಕಿನಿಕ್ಕೆಲದಲಿ
ಹರಿವ ಹುಮ್ಮಸ

ಸೊಗಸುಹೊಲಸುಗಳಿಂ—
ಬೆಣಿಕೆಗಳನು ಸೇರಿ
ಸುಗಮ ಸತ್ಯಕಾಗಿ
ಬೆರೆವ ಸಮರಸ

೩

ನೀತಿ ನಿಗಳವಾಗಿ
ಬಿಗಿದ ಬಂಧನದಲಿ
ಮೀನಿನಂತೆ ಜಾರಿ
ನುಸುಳುವಾತುರ

ನೂರುಜನರ ಬಯಕೆ
ಬಾಯಿ ಬೇಡುವುದಕೆ
ಗುಟುಕಿನಮೃತವಾಗಿ
ಸಲುವ ಕನಿಕರ

೪

ಕರುಣೆ ಕೋದ ಜಗದ
ಕ್ಷಣಿಕ ರಂಜನೆಯಲಿ
ಕವಿಯ ಕಲ್ಪನೆಗಳ
ಬಿಗಿದ ತೋರಣ

ನೋವಿನೊಡನೆ ಹೆಣಗಿ
ನವೆದ ಬಾಳುವೆಯಲಿ
ಕವಿಯ ಕೈಯ ಹಿಡಿದು
ನಡೆವ ದಿಬ್ಬಣ !

೫

ಇರುಳು ತೀರುವನಕ
ತನಗೆ ತಾನೆ ತೋರು
ತಿರುವ ತಾರೆಯಂತೆ
ಮುಗಿಲ ಸಂಗಡ

ಏನೊ ಕಟ್ಟಳೆಯಲಿ
ಜೆತೆಯ ಕಾವುಗೊಂಡು
ಬರಿದೆ ಬೆಳಗುತಿಹುದು
ಬಾಳ ಕಕ್ಕಡ

೬

ಏನೊ ಬರೆಯಲೆಂದು
ಬಳಪವೆತ್ತಿ ಕುಳಿತು
ಬಾನ ಕಡೆಗೆ ಕಣ್ಣ
ಬಳಸಿ ನೋಡಿದೆ

ದಿವದ ಸೃಷ್ಟಿಯೆಲ್ಲ
ಹಣಕಿ ಹೃದಯದತ್ತ
ಮೆಚ್ಚಿ ಮಧುರವಾಗಿ
ಮಾತನಾಡಿದೆ !

೧೦—೮—೧೯೩೩

---

## ರಸಯೋಗ

೧

ಆಗೊಮ್ಮೆ ಈಗೊಮ್ಮೆ ಹೃದಯ ಸಂತೋಷದಲಿ
ಕೂಗುತಿದೆ ಬೆಳಗಿನಲಿ ಮರಿ ಕೋಗಿಲೆ
ಭೋಗದೂರಿನ ಬಾಗಿಲಿನ್ನು ತೆರೆದಿಲ್ಲ ಮುಂ-
ಭಾಗದಲಿ ಕಳೆದಿಹುದು ಬಿಗಿ ಸಂಕಲೆ

೨

ಇಷ್ಟು ಹೊತ್ತಿನ ಕಾಲ ಬರಿದೆ ಕಳೆದಿಹುದೆಂದು
ಮಾಳ್ಕೆ ಮುದಿಯತ್ತೆಯಂತೊದಗಿರುವುದು
ಕಟ್ಟಿರುಳ ಕೋಣೆಯಲಿ ಕಣ್ಮುಗಿದ ಚೇತನೆಯು
ಮೊದಲ ಸೊಸೆಯಂತೆ ಮೈ ಹುದುಗಿರುವುದು

೩

ಹಲರು ಕಣ್ದೆರೆದಿಲ್ಲ—ತೆರೆದರೂ ಕಂಡಿಲ್ಲ
ಕಂಡಿಹುದು ಕಾಮು ಕಲ್ಮಷದ ಬದುಕು
ಹಲರೆಣಿಕೆಗಳ ಹೊತ್ತು ಕೈಲಾಸವೇರಲಿಕೆ
ಬರಲುಂಟೆ? ಬಂದವರು ಬರಲಿ ಸಾಕು

೪

ಯಾರಿಗೋ ಬಯಕೆ ಬಾಯಾರಿ ಕೂಗಿಹುದಲ್ಲ
ತನಗೆ ತಾನೇ ಮೆಚ್ಚಿ ಹರಿದ ಹಾಡು
ಸಾರಗುಣಗಳ ಹೃದ್ವಿಚಾರದಲಿ ತುಂಬಿ ಸಂ—
ಸಾರದಾತ್ಮೀಯತೆಯನರಿತು ನೋಡು !

೫

ನೀಲ ಗಗನ ವಿಶಾಲ ಶೀಲ ಸಾಹಿತ್ಯದಲಿ
ತೇಲಿ ಸಾಗಿದೆ ಸಕಲ ಜೀವಕೋಟಿ
ಹಾಲಿನಂತುಗಿದ ರಸಗಂಗೆಯಲಿ ಮಿಂದು ಮೈ—
ಕೊಸರಿನಸುನಕ್ಕಳಾದಿಗ್ವಧೂಟಿ !

೬

ಆಗೊಮ್ಮೆ ಈಗೊಮ್ಮೆ ಹೃದಯ ಸಂತಾಪದಲಿ
ಕೂಗುತಿದೆ ಬೈಗಿನಲಿ ಮರಿಕೋಗಿಲೆ
ಯೋಗದೂರಿನ ಬಾಗಿಲಿನ್ನು ಮುಚ್ಚಿಲ್ಲ ಮುಂ—
ಭಾಗದಲಿ ಕವಿದಿಹುದು ಕಗ್ಗತ್ತಲೆ !

೨೫—೮—೧೯೫೩

## ತತ್ವ—ತಾಮಸೀ

೧

ಮೇಲೆ ಮೂಡಿತು ಬೆಳಕು.   ಬಾಂದಳ
ಕಾದ ಕೆಂಪಿನ ಕಾವಲಿ
ಮೂಲೆಸೇರಿತು ಕಾಲನಿಯಮಕೆ
ಬೆದರಿ ಕತ್ತಲಬಾವಲಿ

ನೋಡು ನೋಡದೊ ಸತ್ಯಲೋಕದ
ಸೊಗಸು ಕಂಡಿದೆ ಭುವಿಯಲಿ
ನಾಡನಾಡುಗರೆದೆಯ ಗುಡಿಯಲಿ
ನವ್ಯ ಕವನದ ಕಾಕಲಿ

ಹರಿದಿಹುದು ಕಗ್ಗತ್ತಲೆಯ ಪರೆ
ಬಿಗಿದ ಬಾಳುವೆಗಂಗಳ
ಸುರಿದಿಹುದು ಗೆಳೆತನದ ಸೊದೆಯನು
ತುಂಬುಹೃದಯದ ಗಂಗಳ

ಕರೆದಿಹುದು ಮಿದುಮಾತಿನಲಿ ಶುಭ
ಕಾಮನೆಯು ವಿಹಗಂಗಳ
ಮೆರೆದಿಹುದು ಸೌಂದರ್ಯಶಿಲ್ಪಿಯ
ಕಲೆಯ ಮೊದಲಿನ ಮಂಗಳ!

೨

ವ್ಯೋಮ ಭೂಮಿಗೆ ಸೇತುಗಟ್ಟಿದೆ
ಜನರ ಭೌತಿಕ ಮಾನಸ
ನಿಮ್ನ ಧಾಮದೆ ಸೂರೆಯಾಗಿದೆ
ಬಲಿಯ ಭಾಗ್ಯದ ಬೊಕ್ಕಸ

ಸಪ್ತ ಸಾಗರಗಳನು ಹೀರಿದೆ
ಕರ್ಮಯೋಗದ ಕಕ್ಕಸ
ಸಪ್ತ ಲೋಕಂಗಳಲಿ ತೂರಿದೆ
ಗಾಳಿಗಟ್ಟಿದ ರಾಯಸ

ತಿಳಿವು ಕೂಸಿನ ಮೊದಲ ಕೂಗಿಗೆ
ಬಿರಿಯಿತೋ ಬ್ರಹ್ಮಾಂಡವು
ಗೆಲವು ಬಾವುಟವಿರಿಸಿ ಬಾನಿಲಿ
ಹಾರುತಿದೆ ಭೇರುಂಡವು !

ಅಳವು ಕೈಗಳಲಿಹುದು ವಿದ್ಯುತ್
ವಿಸ್ತರದ ಕೋದಂಡವು
ಹೊಳಲ ಮಾಳಿಗೆ ಮನೆಯ ತುದಿಯಲಿ
ಬಿಗಿದ ತಾರಾಭಾಂಡವು !

ಹತ್ತು ಬೆರಳುಗಳೆಣಿಕೆಯಲಿ ಕ
ಟ್ಟಿಟ್ಟ ವಿಶ್ವದ ಗೌರವ
ಹತ್ತು ಸಾವಿರ ಯೋಜನಕೆ ಕಿವಿ
ಗೊಟ್ಟುಕೇಳುವ ಭೈರವ !

ಎತ್ತಲೋಕಂಡಿರದ ಲೋಕಕೆ
ನಟ್ಟನೋಟದ ವಿಪ್ಲವ
ಕತ್ತು ಬಾಗಿಸಿ ಮೌನದಲಿ ಮುಸಿ
ದಿಟ್ಟ ತಾಮಸ ವೈಭವ !

೩

ಕುಡಿಯಿರೋ ಸರ್ವೋದಯದ ಸ
ದ್ಭಾವನೆಯ ತಂಬಾಲನು

ಪಡೆಯಿರೋ ವೈಬೆಮರ ಗಂಗೆಯ
ಸುರಿಸಿ ಗೈಮೆಯ ಕೂಳನು

ತಡೆಯಿರೋ ಮುನ್ನುಗ್ಗುತಿಹ ಮಂ-
ದೇಹ ದೈತ್ಯರ ಸೂಳನು
ನಡೆಯಿರೋ ಭವ್ಯತೆಯ ಬಯಲಲಿ
ಹಿರಿದು ನೆಮ್ಮದಿ ಬಾಳನು

ಸಂಜೆಯಾಗಿದೆ ! ಪಡುವಣಾಗಸ
ಕಾದ ಕೆಂಪಿನ ಕಾವಲಿ
ಕುಂಜಗಳ ಗವಿಯುಳಿದು ಬಂದಿದೆ
ಹಸಿದ ಹರಣದ ಹೆಬ್ಬುಲಿ !

ಮಂಜು ಮುಸುಕಿದೆ ದೈವತದ ಧ್ರುವ
ತಾರೆ ತೋರಿದೆ ಬಾನಿಲಿ
ಅಂಜದಿರು. ತಿರೆಸದ್ಗಮದ ಕೈ
ವಿಡಿದು ಮುಂದಕೆ ಸಾಗಲಿ !

೪—೧೧—೧೯೫೩

---

## ‘ಮೂನಿದ್ವಿಷಾವಹೈ’

ಕಂಡೆನರೆನಿದ್ದೆಯಲಿ ಧೂಮಕೇತುವು ಬಳಸಿ-
ಕೊಂಡ ಸಂಸ್ಕೃತಿಯ ತೇಜೋವೈಭವ
ಚಂಡಮಾರುತವೆದ್ದು ಬೀಸಿಹುದು, ಕಾರ್ಮೋಡ
ಕೆಂಡಗರೆದಿಹುದು. ಏನಾ ವಿಪ್ಲವ !

× × × ×

೧

**ಚಾ**ಗದುರುಳಲಿ ಕುಸುರಿಕಾಳನೊಂದನು ತೋರಿ
ಕರೆವ ರೀತಿಯೆ ಜಗದ ಸತ್ರವೃತ್ತಿ
ಭೋಗದೊಂದಲಸಿಕೆಯ ಮೂಗುದಾಣವನೊಪ್ಪಿ
ಸಾಕು ಸಾಗುವ ಹೀನ ಚಿತ್ತವೃತ್ತಿ

ನಿನ್ನ ಗೈಮೆಯ ಗಳಿಕೆಗೊಂಬ ಪ್ರತ್ಯಾಶೆಯಲಿ
ಬಡಿವ ಡೋಲಿಗೆ ತಲೆಯ ತೂಗಬೇಡ
ನಿನ್ನೆ ತಿಂದೆಣಿಕೆಯಲಿ ಕಲ್ಪನೆಯ ಬೆನ್ನೇರಿ
ಕಣ್ಮುಚ್ಚಿ ಮಂಡಿಗೆಯ ಮೆಲುಕಬೇಡ

**ಏ**ನೊ ಕಂಡಂತಿರುವ ಕಾಮರೂಪವು ಬೇರೆ
ಭಾವನೆಯ ಜಗದಿರುವು ತಿರುವು ಮುರುವು
ತಾನೆ ತನ್ನನು ತಿದ್ದಿ ನಡೆವ ಯತ್ನವು ಬೇಕು
ತನ್ನ ಕಾಲಿಗೆ ತನ್ನ ಕೈಯ ನೆರವು

೨

**ಬ**ಲೆಯ ಬೀಸಿದ ಗಿಣ್ಣು ಹತ್ತುಸಾವಿರ ಕಣ್ಣು
ಸಿನ್ನ ನಿಷ್ಕ್ರಮಕಾಗಿ ತೆರೆದುದಲ್ಲ
ಅವರಿವರ ಮಾತಿನಲಿ ಮರುಳಾಗದಂತೆ ಬಾ
ಹಣಕಿ ಹೆಜ್ಜೆಯನಿಟ್ಟು ಮೆಲ್ಲ ಮೆಲ್ಲ

ಮಲಗಿದವನೆಚ್ಚರಂ ಗೊಳಲುಂಟು ತಂತಾನೆ
ಹೊರಳುತಿಹ ಹವ್ಯಾಸಕೇತರ ಗತಿ ?
ಆಲಸಿಕೆಯ ಮಾರ್ಗದಲಿ ಕೊರಳುದ್ದ ಕೆಸರಿನಲಿ
ತೊಳಲಿದರೆ ಬಂದೀತೆ ಸುಖದ ಸರತಿ ?

ನೋವು ತಾನೊಮ್ಮೊಮ್ಮೆ ನೆಂಟನಂತೊದಗಿದರೆ
ಬೆದರದಿರು ಬಾಳನ್ನ ಬಡಿಸಲುಂಟು
ಸಾವು ಸಂಕಟವಾಗಿ ಬರದಿರಲಿ—ಬಂದರೂ
ಮಿಂದು ಮೈಮುಡಿಗೊಂಡು ಕಾಯುವದಟು !

೩

ಕೆಣಕಿ ಕಾಲ್ಗೆದರಿ ಕೈಹೊಸೆದು ಕಾದುವ ಹುಮ್ಮು
ಹಸಿದ ಹೆಬ್ಬುಲಿಯಂತೆ ಹಾರಲಹುದು
ಮಿಣುಕು ಸೊಡರಿನ ಸುತ್ತ ಸುಳಿವ ಪಾತರದಂತೆ
ಮನದಹಂಕಾರ ಮೇಲೇರಿಬಹುದು

ನಿನ್ನ ಬಗೆ ಕಾವೇರಿ ಕಣ್ಣು ಕೆಂಪಡರಿದರೆ
ಕೈಗಟ್ಟಿ ಕಾಲ್ಬೆರಳ ತುದಿಯನೆಣಿಸು
ನಿನ್ನ ಬಾಯ್ದೆರೆದು ಹಲ್ಕಿರಿದು ಹುಚ್ಚಾಡಿದರೆ
ಹತ್ತು ಹತ್ತರ ಲೆಕ್ಕ ಹಿಂದೆ ಗುಣಿಸು

ಎನಿತೆನಿತೊ ಕಾವಿನಲಿ ಹೊಳಲು ಹಪ್ಪಳವಾಗಿ
ಹುರಿದಿಹುದು ಸಾಕದೇ ಸುಡುವ ಬೆಂಕಿ
ಬದುಕಿನಲಿ ಕುದಿಯುಂಟು, ಕುದಿಯು ವಿಸ್ಫೂಟವಾಗಿ
ಹೊರಹೊಮ್ಮದಿರಲಿ ಹೊಸ ಜ್ವಾಲಾಮುಖಿ !

೪

ಗಾಳಿ ನೀರ್ಬೆಂಕಿ ಸಮತೂಕದಲಿ ತೆರವಾಗಿ
ಕೂಡುತಿಹುದೇ ವಸ್ತುಸಾಮರಸ್ಯ
ಕೂಳಿನಲಿ ಕುದಿಯೆದ್ದು ಬಾಳ ನೀರಾರಿದರೆ
ತಾಳಲಾರದ ವಿಷಯ ವೈಮನಸ್ಯ

ಮುಂದಿರುವ ಮಳಲಿನಲಿ ಮುತ್ತು ಹೆಕ್ಕುವ ರೀತಿ
ಮಾನುಷತ್ವದ ಮಹಿಮೆಯರಿಯಬೇಕು
ನಂಜನೇ ಕಡೆಕಡೆದು ಗುಟುಕು ಸೊದೆಯನು ಕಂಡ
ಸಹನೆಯಲಿ ಸದ್ಗತಿಯನೇರಬೇಕು

ಅದೊ! ಬೆಳಕು ಮೂಡುತಿದೆ ತಿಮಿರರಾಶಿಯನೇರಿ
ತೋರುತಿದೆ ದೈವಿಕದ ಮಿತ್ರಭಾವ
ಅದೊ! ಕೇಳು ಮೊಳಗುತಿದೆ – "ಮಾವಿದ್ವಿಷಾವಹೈ"
ಒಕ್ಕೊರಲಿನಕ್ಕರೆಯ ವಾಗ್ವೈಭವ

× × × ×

ಕಂಡೆನೆಳ್ಚರಗೊಂಡು ಧೂಮಕೇತುವು ಸರಿದು
ಬಂದ ಸಂಸ್ಕೃತಿಯ ತೇಜೋಮಂಡಲ
ಮಂದಮಾರುತವು ಮೈತಣಿಸಿಹುದು. ಗರಿಮೋಡ
ಮಂಡಲೆಯುತಿದೆ—ಶರಣು ಧರ್ಮಶೀಲ!

೮—೧೧—೧೯೫೩

## ಬೆಳದಿಂಗಳಲಿ

೧

ಮುಗ್ಧಮನಃ ಪ್ರಣಯದ ಮೇಲ್ಸೆರಗನು
ಹೊದ್ದಂತಿಹುದೀ ರಾತ್ರಿ
ಸ್ನಿಗ್ಧ ಶರತ್ಕಾಲದ ರಸಗಂಗೆಯೊ
ಳದ್ದಿದೆ ಪುಣ್ಯಧರಿತ್ರಿ!

ಆ ಕಡೆ ಬೆಳ್ಮೋಡದ ಬಾಣಂತಿ
ಬಯಕೆಯಲೇನೋ ಬರೆದ ಕಸೂತಿ

ನೀಲಾಕಾಶದ ತೆಳುಸೀರೆಯಲಿ
ಕಂಡಂತಿದೆ ಸೆಳೆಮಿಂಚಿನ ರೀತಿ

ಶೃಂಗಾರದ ಹೂಹುಡಿಗಳ ಚೆಲ್ಲಿ
ಪನ್ನೀರನು ಸೂಸಿದೆ ತಂಗಾಳಿ
ಸಂಗೀತದ ಸಮಯೋಚಿತ ಸೇವೆಯ
ಲೋಲೈಸಿದೆ ಮಹನೀಯ ಮದಾಳಿ

ಓ ಚೆಲುಗಂಗಳ ಸೊಬಗಿನ ಜಿಂಕೆ
ಬಾ ಬೆಳದಿಂಗಳಿನುಪವನಕೆ!

೨

ತೊರೆಗಳಲೆಲ್ಲಾ ಹರಿದಿದೆ ಜೇನ್ ನವಿ
ರೆದ್ದಿದೆ ಪರ್ವತ ಸಾನು
ತನತನಗೇ ಬ್ರಹ್ಮಾಂಡದ ಭಾಂಡಕೆ
ಹಾಲ್ಸುರಿಸಿದೆ ಸುರಧೇನು!

ಪಿಸುಪಿಸು ಮಾತಿನ ಮಮತೆಯ ಮಾಟಕೆ
ಆಕಾಶವೆ ಕಿವಿಗೊಟ್ಟಿದೆ ಬಾಗಿ
ಗುಸುಗುಸು ಗೈಮೆಯ ಹೃದಯೋನ್ಮಾದಕೆ
ನಾಲ್ದೆಸೆ ನಗೆಯೈಸಿದೆ ತಲೆದೂಗಿ!

ಹೊಸತೇನೋ ಹೊಂಗನಸಿನ ಬಯಕೆ
ಹೊಸೆದಿದೆ ಯೌವನದನುಗಮಕೆ
ಬಿಸಿರಕುತದ ಭಾವನೆಗಳನೆಲ್ಲಾ
ಉಸಿರೆರೆದಿದೆ ತವ ಮೃದುಪದಕೆ!

ಓ ಚೆಂದುಟಿಗಳ ಚೆಲುವಿಕೆಯಾಕೆ
ಬಾ ಬೆಳದಿಂಗಳ ಬಿನ್ನಣಕೆ!

೩

ಹಸಿದಿದೆ ಹರಣ. ಎಸರಿಟ್ಟದೆ ಮನ
ಕುದಿಕುದಿದಿಹುದೀ ಹೃದಯ
ಒಣವೇದಾಂತದ ಜೀವನ ಮರಣ
ಬರಿ ತಲೆಸುತ್ತುವ ವಿಷಯ!

ಮಾಯಾಬಂಧದ ಮಧುರ ಸಮೀಕ್ಷೆಗೆ
ಸಿಡಿದೆದ್ದಿದೆ ಸಂತೋಷದ ಲಹರಿ
ಕಾಯದ ರಸಕಲ್ಲೋಲದ ಕದನಕೆ
ಹೊಡೆದಿದೆ ಚಿರಕಲ್ಯಾಣದ ಭೇರಿ!

ಮೌನದ ಬಯಕೆ— ತಾವೇ ಕೂಡುವ
ಕಾಮನೆಗಳ ಸುಖ ಸಾಫಲ್ಯ
ಮಾಣದ ಮಿಡಿತಕೆ ಮೈಮನಸೊಪ್ಪಿಸಿ
ಮಣಿಯುವ ಮೆಚ್ಚಿನ ಕೈವಲ್ಯ!

ಓ ನಳಿದೋಳ್ಗಳ ನಚ್ಚಿನ ಬೆಳಕೆ
ಬಾ ಬೆಳದಿಂಗಳ ಮಂಟಪಕೆ!

೧೧—೧೧—೧೯೫೩

---

## ಸಖೀಗೀತೆ

೧

ತಿಂಗಳಲೋಕಕೆ ಹೋಗುವ ಬಾ ಸಖಿ
ಭೃಂಗದ ಬೆನ್ನೇರಿ
ಹುಣ್ಣಿಮೆ ಬೆಳಕಿನ ಹಾಲನು ಕುಡಿಯುವ
ನಾವಿಬ್ಬರು ಸೇರಿ

ಶೃಂಗಾರದ ಸವಿಸೊಲ್ಲನು ಸಾರಿಹು—
ದಂಗಳದಲಿ ಬವರಿ
ಅಂಗಾಂಗದ ಮೈಬೆಮರೊರಸಿದೆ ತೆಳು
ತಂಗಾಳಿಯ ಲಹರಿ

ಮುಂಗಾರಿನ ಮಳೆ ಹನಿಯನು ಸೂಸಿದೆ
ಗರಿ ಮೋಡದ ಚಮರಿ
ಹಿಂಗದ ಮಮತೆಯ ಮಂತ್ರವನೊರೆದಿದೆ
ಅದೊ ನೋಡು ಚಕೋರಿ

ಕಂಗಳಲೇನೋ ಹೊಂಗನಸನು ಬಿಗಿ
ದಂತಿದೆ ಜಗದ ಪರಿ
ಮಂಗಳ ರೂಪದ ಮನಸಿನ ಮಲ್ಲಿಗೆ
ಯರಳಿದೆ ನಗೆ ಬೀರಿ

ತುಂಗ ಕುಚದ ಬಿಸವಂದಕೆ ಮೇಲ್ಸೆರ—
ಗಿಳಿದಿದೆ ಕೆಳಜಾರಿ
ಅಂಗಜನೂರಿನ ಹೊಸ ಹುಟ್ಟಿನ ಮೈ
ತುಂಬಿಹುದಮೃತ ಝರಿ

ಮುಂಗಾಣದ ಮೃದು ವೇದನೆಯಲಿ ಮೊನೆ
ಗೊಂಡಿದೆ ಭಾವಸಿರಿ
ತಿಂಗಳಲೋಕಕೆ ಹೋಗುವ ಬಾಸಖಿ
ಭಾವದ ಬೆನ್ನೇರಿ!

೨

ಹಸಿವಿಲ್ಲದ ಹೂ ಹರಯದ ಹಕ್ಕಿಯು
ಹಾರಿದೆ ಗರಿಗೆದರಿ

ಹೊಸತೇನೋ ಸಂಕಲ್ಪಕೆ ಸೈ ಶರ—
ಣೆಂದಿದೆ ಭುವಿಬೆದರಿ

ಒಸರಿಟ್ಟಿದೆ ಮೂಲೋಕದ ಮಧುರಾ
ರಂಭದ ಮಧುವಾರಿ
ಉಸಿರೆಳತದ ಕಸವಿಸಿಯಲಿ ಬಗೆ ಜೋಂ—
ಪಡರಿದೆ ಮದವೇರಿ

ಕಿಸು ಮುನಿಸಿನ ಕಾರ್ಪಣ್ಯವನಟ್ಟಿದೆ
ಕಾಮನ ಕಣೆಯು ಗುರಿ
ಬಿಸು ಬಂಗಾರದ ಮೂಸೆಯಲಿಟ್ಟಿದೆ
ಬಾಳನು ಬಯಕೆಯುರಿ

ಹುಸಿ ಲಜ್ಜೆಯ ಹುಚ್ಚಾಟದ ಮುಸುಕಿನ
ಮುಗ್ಧತೆಯನು ಪಾರಿ
ನಸುನಗೆ ನೈಗರೆದಿದೆ ಕಡೆ ನೋಟದ
ನಿಚ್ಚಣಿಕೆಯನೇರಿ

ಅಸು ಸಂತೋಷದ ರಸಕೈವಲ್ಯಕೆ
ಕೈನೀಡಿದೆ ಕೋರಿ
ಹಸನಾಗಿದೆ ಮಾನುಷ್ಯದ ಮದನಾ—
ಕಾಂಕ್ಷೆಯ ಮೇರುಗಿರಿ

ತಿಂಗಳಲೋಕಕೆ ಹೋಗುವ ಹಿಮ ಸಾ—
ರಂಗದ ಬೆನ್ನೇರಿ!
ಶೃಂಗಾರದ ಮಣಿಮಂಚವನೇರುವ
ನಾವಿಬ್ಬರು ಸೇರಿ!

೧೫—೧೧ - ೧೯೫೩

## ವಿರಹಿಣೀ ಗೀತೆ

೧

ನನ್ನ ಬಾಳು ಸಾಗುತಿಹುದು ಮೆಲ್ಲಮೆಲ್ಲ
ಕೈಯ ಮೇಲೆ ಕಾಯುತಿರುವುದೆನ್ನ ಗಲ್ಲ
ಯಾರೊ ಬಂದು ಸವಿಯ ಮುತ್ತು ಸುರಿಯಲಿಲ್ಲ
ಯಾರೊ ಹೊಂದಿಸಿರುವ ಕಾವು ಬೆರೆಯಲಿಲ್ಲ
ನನ್ನ ಸುಖದ ಗಳಿಗೆ ಹೊತ್ತು ಮೂಡಲಿಲ್ಲ
ಗಾಡಿಯಂತೆ ಹೋಗುತಿಹುದು ಮೆಲ್ಲಮೆಲ್ಲ !

೨

ತುಂಬಿ ಕೂಡುತಿರುವ ಹಾಡು ಯಾರಿಗೇನೊ
ನನ್ನ ಪಾಡು ಯಾರು ಬೇಡದಿರುವ ಜೇನೊ
ಮುಗಿಲು ಹೊಂಚು ಹೂಡುತಿರುವ ಬರಿಯ ಬಾನೊ
ಭುಗಿಲನೆದ್ದು ಸುಡುವ ಮಿಂಚು ಬಾರದೇನೊ
ಭುವಿಯ ಗೊತ್ತು ಹರಕೆ ಹೊತ್ತು ಹೊರೆದ ಚೆಲ್ಲ
ಮನೆಯ ಸೇರದಿರುವ ಸೊತ್ತು ನನ್ನದಲ್ಲ !

೩

ನಲುಮೆ ದೂರ ಸಾರುತಿರುವುದೆನ್ನ ಮರೆತು
ಹಸಿದ ಹೊಟ್ಟೆಗಿನ್ನು ತೋರದಿರುವ ತುತ್ತು
ಬೆರಳಿಗಾಗಿ ಬಿಗಿದು ತಂತಿಕಾದ ಹೊತ್ತು
ನನಗೆ ನಾನೆ ನಾಚುತಿರುವ ಹದನವಾಯ್ತು !
ಹರುಷಕಾಗಿ ಹೆಣ್ಣುತನವು ಮೊಳೆತು ಹೊತು
ಸೆಳೆದ ಕಣ್ಣ ಕೊನೆಯ ಬಾಣ ಹಿಮ್ಮೆಟ್ಟಿತು !

೪

ನಿದ್ದೆಗೊಂಡು ಕಣ್ಣೆವೆಗಳ ಮುಚ್ಚಲಿಲ್ಲ
ಕದ್ದು ಕದ್ದು ಬರುವನೇನೊ ನನ್ನ ನಲ್ಲ!
ಸದ್ದು ಕೇಳಲೊಡನೆ ಹಾರಿ ಮುಂಬಾಗಿಲ
ಎದ್ದು ನೋಡಿ ಬಳಲಿ ದೇಹ ಬೆಮರಿತೆಲ್ಲ
ಮುದ್ದುಗೊಂಡು ಮೈಮರೆಯದ ಬಾಳ್ ನಿಷ್ಫಲ
ಇದ್ದರೇನು ಬಗೆ ತುಂಬದ ಬರಿದು ಚೀಲ!

೫

ಯಾರಿಗಾಗಿ ನಗೆಯ ಬಣ್ಣ ಬಳಿವೆನೀಗ
ನೀರ ಮೇಲೆ ಸುರಿಸುರಿದಿಹ ಹವಿರ್ಭಾಗ
ಬೇನೆ ಬವಣೆ ಯೇನೆಯಿರಲಿ ಬರಲಿ ಬೇಗ
ನನ್ನ ಪಾಲಿಗದುವೆ ಪುಣ್ಯದಮೃತ ಯೋಗ!
ನನ್ನ ಬಾಳ ಪಯಣವೇಕೆ ತೀರಲಿಲ್ಲ!
ಗಾಡಿಯಂತೆ ಹೋಗುತಿಹುದು ಮೆಲ್ಲ ಮೆಲ್ಲ!

೧೭—೧೧—೧೯೫೩

---

## ಅಂತರ್ವಿಕಾಸ

ನಿನ್ನ ನೋಡಲಿಕೆಂದು ಹೊಂಗದಿರ ಬಿಸಿಲಂತೆ
ಬಂದಿಹೆನು ನಿನ್ನ ಬಳಿಗೆ
ತನ್ನ ತನದಭಿಮಾನದಾತ್ಮಸೇವೆಯ ಸುಕೃತ—
ಕಿಂದಿನದೆ ಅಮೃತಗಳಿಗೆ
ಎಂದೊ ತೆರೆದಾದರದ ಸಮಯ ಸೌರಭಕಾಗಿ
ತೊಡಗಿದ ವಸಂತಯಾತ್ರೆ

ಹಿಂದೆ ಮುಂದೆನದೆ ಕೈಗೊಂಬ ಕಾರುಣ್ಯರಸ —
ದಿಂಬಿರಲಿ ಕಂಜನೇತ್ರೆ !

ಚೆಲುವಿಕೆಯ ತೀರ್ಥದಲಿ ಮಾಯುವಾಸೆಯ ಹರಕೆ
ಹೊತ್ತಿರುವುದೀ ಚೆಂದುಟಿ
ಅವರಿವರ ಕಾವಿನಲಿ ಕೂಡಲಾರದ ಕದಪು
ತವಸುಗೊಂಡಿಹ ಧೂರ್ಜಟಿ !

ಆರದೋ ಮೃದುಮನಸಿನಾರೈಕೆಯಲಿ ಸೊಗಂ
ದೋರಲಿಹ ಸರ್ವಸಿದ್ಧಿ
ನೂರು ಹುಚ್ಚೆಣಿಕೆ ತಲೆದೋರದಂತೋಲೈಸಿ
ಕಾವ ದೈವಿಕ ಸನ್ನಿಧಿ !

ಕೊಡಲಮ್ಮದೀಬದುಕು ಕೊಳುವ ಜೋಳಿಗೆಗೊಂಡು
ಬೇಡುವುದೆ ಭವದ ಭಿಕ್ಷೆ
ನಡುಹರಯ ಪಟ್ಟ ಚಾವಡಿಯ ಚೌಗಟ್ಟಿನಲಿ
ಕೊಡುವುದೇ ತವ ನಿರೀಕ್ಷೆ !

ಯುಗಯುಗದ ವಾಸನೆಗೆ ಭುಗಿಲೆದ್ದ ಕಾಮನೆಯ
ನಗುವ ನಿರ್ವ್ಯಾಜ ಮಮತೆ
ಉಗುವ ಸಿಂಗಾರದಲಿ ಬಿಗಿದ ಬಾಂಧವ್ಯದಲಿ
ಹೊಗರಿದಾನಂದಗೀತೆ

ಸಾಕು ಸಂಕೇತದಲಿ ಕುಣಿವ ಕಣ್ಣಿನ ಕುಣಿತ
ಮಾದಕದ ಮಂದಹಾಸ
ನಾಲ್ಕುದಿಕ್ಕಿನ ಸ್ವಸ್ತಿವಾಕ್ಯದಲಿ ತೊಡಗಿರಲಿ
ಹೃದಯದಂತರ್ವಿಕಾಸ !

ನಿನ್ನ ನೋಡಲಿಕೆಂದು ಮುಂಗಾರು ಮಳೆಯಂತೆ
ಬಂದಿಹೆನು ನಿನ್ನ ಬಳಿಗೆ
ತನ್ನದೆಂಬಭಿಮಾನ ಪೂರ್ಣಪರವಶತೆಯನು
ಹೊಂದಿರಲಿ ಹೃದಯದೊಳಗೆ !

೨೩—೧೧—೧೯೫೩

---

## ಕವಿಯ ಕಾದಾಟ

೧

ಕವಿಯ ಕುಟೀರದ ಬಾಗಿಲ ಬಳಿಯಲಿ
ಸುಳಿಯಿತು ಹೆಬ್ಬಾವು
ಅದೊ ಬುಸುಗುಟ್ಟುತ ಮೆಟ್ಟಿಲನೇರಿತು
ಹಸಿವಿನ ಹೆಬ್ಬಾವು

ಕವಿ ಬಿತ್ತಿದ ಭಾವನೆಗಳ ಹೊಲದಲಿ
ಮೊಳೆದಿದೆ ಶೃಂಗಾರ
ಕವಿ ಸುರಿಸಿದ ಕಂಬನಿಗಳ ಹೊಳೆಯಲಿ
ಕಳೆದಿದೆ ಭವದ ಬರ

ಕವಿಕಲ್ಪನೆಗಳ ಕಾಮನೆಯುಪವನ
ಕವಿಯಾಡಿದ ನುಡಿ ಶೀತಲ ಪವನ
ಕವಿ ಕೆತ್ತಿದ ಲಾವಣ್ಯನಿದಾನ
ಕವಿದೃಷ್ಟಿಯ ಸಮತೆಯ ನಾವೀನ್ಯ

ಕವಿ ಸಾರಿದ ಸಂಕಷ್ಟದ ಸೆರಗಿಲಿ
ಕೇಳಿದೆ ನಿಡುಸುಯ್ಲು
ಕವಿಯೂರಿದ ಹೆಜ್ಜೆಯ ಹಿಂಬದಿಯಲಿ
ಕಂಡಿದೆ ಕಟ್ಟಿರುಳು

ಕವಿಯೊಡಲಿನ ಮಿದುಗರುಳನು ಹಿಸುಕಿದೆ
ಹಸಿವಿನ ಹೆಬ್ಬಾವು
ಮರಿಮಕ್ಕಳ ಹೆಂಡಿರ ಕಣ್ಣೀರನು
ಕುಡಿದಿಹುದೀ ನೋವು!

೨

ಕವಿಯ ಕುಟೀರದ ಬಳಿಯೊಡನಾಟಕೆ
ಬಂದಳು ಹೆಮ್ಮಾರಿ
ಬರಿಹೊಟ್ಟೆಯ ಬಿಕ್ಕಳಿಕೆಯ ಬಡತನ
ಬೀನೆಯ ಹಟಮಾರಿ

ಕೆದರಿದ ಕೂದಲ ಕಾತರ್ಯದ ಕಣೆ-
ಯೂರಿದ ಕಣ್ಣೋಟ
ಅರೆಬತ್ತಲ ಮೈ ಸೊರಗಿದ ನಡೆ ನಿ-
ಟ್ಟುಸಿರಿನಬಂಡಾಟ

ಕವಿ ಸಾರಿದ ಸದ್ಧರ್ಮಗಳ ಲೋಕ
ಕವಿ ತೋರಿದ ಸೌಂದರ್ಯವಿಪಾಕ
ಕವಿ ಕಾವ್ಯದ ಕಮನೀಯ ವಿವೇಕ
ಕವಿ ಸೃಷ್ಟಿಯ ಸುಖ ಸರ್ವತೋ ಮುಖ

ಕವಿ ಕಟ್ಟಿದ ಕನಸಿನ ಕೊತ್ತಳಗಳ
ಕೆಡೆದಿಹುದೀ ಮಾರಿ
ಹಿಡಿಯೂಟದ ಹಸಿವಾರದ ಬದುಕಿಗೆ
ಬ್ರಹ್ಮಾಂಡವೆ ಗೋರಿ

ಹೊರನೀಡಿದ ಕೆನ್ನಾಲಿಗೆಯಲಿ ಕವಿ
ಯೊಪ್ಪತ್ತಿನ ಗ್ರಾಸ
ಬರೆ ಬರೆದಿಹ ಸಾಹಿತ್ಯದ ಹೊರೆಯಲಿ
ಸೆಳೆದನು ನಿಶ್ವಾಸ!

೨—೨—೧೯೫೪

## ಕಲ್ಯಾಣ ಗೀತೆ

೧

ಬೇಸಗೆಯ ಬೆರಟನಲಿ ಭವದ ಬಂಡಾಟದಲಿ
ಬದುಕು ಬಾಯಾರುತಿದೆ ಸುಡುವ ಮಧ್ಯಾಹ್ನ
ಸೂಸುವಾದರದ ಸೌಹಾರ್ದ ಸೇಚನೆಗಾಗಿ
ಕೋರಿಕಾದಿದೆ ಕಾಮನಂದನೋದ್ಯಾನ

೨

ಇತ್ತಡಿಯ ಕಣ್ಕೊಳಕು ಕೊಚ್ಚಿಹರಿಯಲು ಬೇಕು
ನಿರ್ಮಲತೆ ನಾವೀನ್ಯ ನಿತ್ಯಸಂತೋಷ
ಸುತ್ತ ಮುತ್ತಿನ ಜಗತಿ ಹಸುರು ಹಚ್ಚನೆಯಾಗಿ
ನಕ್ಕುನೋಡುವ ಹೃದಯದಂತರ್ವಿಕಾಸ

೩

ಚೆಂದುಟಿಯ ಸಂಪುಟದ ಗುಟುಕಿನಮೃತದ ಮಧುರ
ಮರ್ಮರದಿ ಸುರಿಯಲಿಹ ಕಲ್ಯಾಣವೃಷ್ಟಿ
ನಳಿದೋಳತಲ್ಪದಲಿ ಚೆಲುಗಣ್ಣ ಶಿಲ್ಪದಲಿ
ತೊಡಗುವಾತ್ಮೀಯತೆಯ ಸುಖದ ಸಂಸೃಷ್ಟಿ

೪

ನಡುಹರಯ ಕಾವೇರಿ ಬಾಳುವೈಬೆಮರಿಳಿಸಿ
ಯೆಣ್ದೆಸೆಯ ನೋಡುತಿದೆ ತೀರದಿಹ ಬಯಕೆ
ಗೆಲ್ಲುಗೆಲ್ಲಿನ ತುದಿಯ ಗೊಂಚಲಲಿಹೂತು ಹು
ಮ್ಮಸದಿ ಹೊರಹೊಮ್ಮುತಿದೆ ಸೌಂದರ್ಯ ರೇಖೆ

೫

ಬದುಕು ಬಾಡುವಮುನ್ನ ಬಯಕೆಯಾರುವ ಮೊದಲು
ಹಾಲುನೀರೊಂದಾಗಿ ಕೂಡುತಿಹ ರೀತಿ
ಮುಂಗಾರು ಮಳೆ ಸುರಿದ ಮಂಗಲಾಮೃತವಾಗಿ
ಶೃಂಗಾರಕೊದಗಿಹುದು ಸಕಲರಸನಿಃಸೃತಿ

೬

ಏರುತಗ್ಗೆನುವ ಸಂಸಾರ ಪಥದಲಿ ದಾರಿ
ತೋರಲಿಹ ಜೀವನದ ಚಿರ ಸಾರಥಿ
ವರ್ಷ ವರ್ಷದ ಪುಣ್ಯ ಸಫಲ ಸಾಧನೆಗಾಗಿ
ಬೆಳಗಿರಲಿ ಪೂರ್ಣತೆಯ ಪಂಚಾರತಿ !

೧೩—೨—೧೯೫೪



## ಶ್ರೀ ಎಸ್. ವೆಂಕಟರಾಜರ

# ಅಮೋಘ ಕೃತಿಗಳು



**ಕರಿಯರ ಪ್ರಪಂಚ, ಉಡುಪಿ—ಇವರಿಂದ**

೧. ರಂಗಭೂಮಿ
೨. ಆಕಾಶಗಂಗೆ
೩. ಎರಡು ಏಕಾಂಕ ನಾಟಕಗಳು
೪. ಕವಿತಾ ಕಾಮಿನಿ
೫. ಸಪ್ತಸಾಗರ

**ಶ್ರೀಕೃಷ್ಣ ಪ್ರಕಾಶನ, ಉಡುಪಿ—ಇವರಿಂದ**

೬. ಅಂಬುಜಾಕ್ಷಿ
೭. ಧರ್ಮಶಾಲೆ
೮. ತುಂಗಮ್ಮನ ತವರುಮನೆ
೯. ಕೈಲಾಸದಲ್ಲಿ ಕಮ್ಯುನಿಸ್ಟರು
೧೦. ಕವಿತಾ ಕಾಮಿನಿ, ಭಾಗ ೨

**ಅಚ್ಚಿನಲ್ಲಿ—**

೧೧. ಕಾವ್ಯ ಮನೋರಮಾ (ಕನ್ನಡ—ಸಂಸ್ಕೃತ)